14

# ಅಚಲ

ಬಿಡಿಪ್ರತಿ : 4 ರೂ.

ತಿಂಗಳ ಪತ್ರಿಕೆ

ಏಪ್ರಿಲ್ - 2006

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 21   ಸಂಚಿಕೆ : 4

*ಸಂಪಾದಕ ಮಂಡಳಿ*

ಎಸ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎಸ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by Dr. N. Gayathri**
**Published by Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


## ಪ್ರೀತಿಯ ಚಂದಾದಾರರೇ,

ಇಪ್ಪತ್ತೊಂದನೆಯ ವರ್ಷಕ್ಕೆ ಕಾಲಿಟ್ಟಿರುವ 'ಅಚಲ' ಓದುಗರ, ಚಂದಾದಾರರ, ಬರಹಗಾರರ ಬೆಂಬಲವನ್ನು ಬಹಳವಾಗಿ ಅಪೇಕ್ಷಿಸುತ್ತದೆ. ಇಲ್ಲಿಯವರೆಗೆ ನಿಮ್ಮ ಲೇಖನಗಳ ಮೂಲಕ ಚಂದಾ ಮತ್ತು ಆರ್ಥಿಕ ನೆರವಿನ ಮೂಲಕ ನಮ್ಮನ್ನು ಪ್ರೋತ್ಸಾಹಿಸಿದ್ದೀರಿ. ನಿಮ್ಮೆಲ್ಲರ ಪ್ರೋತ್ಸಾಹದಿಂದ ಅಚಲ ಬೆಳೆಯಬೇಕಿದೆ. ನಿಮ್ಮ ಚಂದಾ ಮುಗಿದ ನಂತರ ದಯವಿಟ್ಟು ನವೀಕರಿಸಿ. ನಿಮ್ಮ ಆತ್ಮೀಯರಿಗೆ, ಸ್ನೇಹಿತರಿಗೆ ಚಂದಾ ಮಾಡಿಸಿ ಅಚಲದ ಬಳಗವನ್ನು ವಿಸ್ತರಿಸಿ.


ಅಚಲ ವಿಳಾಸ

**108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,**
**ಬನಶಂಕರಿ 3ನೇ ಹಂತ, ಬೆಂಗಳೂರು - 560 085**

ಸಂಪಾದಕೀಯ

# ಕಟ್ಟಾವಾದಿಗಳ ನಾಡಲ್ಲಿ ಮಹಿಳೆಯ ಸಾಧನೆ

ಕಟ್ಟಾ ಇಸ್ಲಾಮಿಕ್ ದೇಶದಲ್ಲಿ ಮಹಿಳೆಯೊಬ್ಬಳು ಪುರುಷ ಕ್ಷೇತ್ರವನ್ನು ಪ್ರವೇಶಿಸಿ, ಅವರೊಡನೆ ಸರಿಸಮನಾಗಿ ಸ್ಪರ್ಧಿಸುವುದಲ್ಲದೆ, ತಾನೇ ಚಾಂಪಿಯನ್ ಪಟ್ಟ ಗಿಟ್ಟಿಸುವುದು ಸಾಧಾರಣ ಸುದ್ದಿಯೇನಲ್ಲ. ಈ ಅಸಾಧಾರಣ ಸುದ್ಧಿ ಮಾಡಿದ್ದು ಲಾಲೇ ಸೆದ್ದಿಗ್. ಈ ಸುದ್ದಿ ಮಾಡಿ ಈಗಾಗಲೇ ಹೆಚ್ಚು ಕಮ್ಮಿ ಒಂದು ವರ್ಷವಾಗಿದೆ.

29 ವರ್ಷದ ಲಾಲೇ ಸಿದ್ದಿಗ್ ಪ್ರೊಡಕ್ಷನ್ ಮ್ಯಾನೇಜ್‌ಮೆಂಟ್‌ನ ವಿದ್ಯಾರ್ಥಿನಿಯಾಗಿದ್ದು, ತೆಹರಾನ್‌ನಲ್ಲಿ ನಡೆದ ರಾಷ್ಟ್ರೀಯ ಮೋಟಾರ್ ರೇಸ್‌ನಲ್ಲಿ, ಎಲ್ಲಾ ಪುರುಷ ಸ್ಪರ್ಧಿಗಳನ್ನು ಹಿಂದೆ ಹಾಕಿ, ಚಾಂಪಿಯನ್ ಆದರು. ಜೊತೆಗಿದ್ದ ನ್ಯಾವಿಗೇಟರ್ ಸಹ ಮಹಿಳೆಯೇ, ಇಂಜಿನ್ ದುರಸ್ತಿಯಾಗಲೀ, ಚಕ್ರ ಬದಲಾಯಿಸುವುದಾಗಲೀ ಎಲ್ಲವನ್ನೂ ಖುದ್ದಾಗಿ ಲಾಲೇ ಸೆದ್ದಿಗ್ ಮಾಡಿದ್ದು. ಇಷ್ಟೇ ಅಲ್ಲ, ಈ ಸ್ಪರ್ಧೆಯಲ್ಲದೇ, ರಾಷ್ಟ್ರೀಯ ರ್‍ಯಾಲಿ ಸ್ಪರ್ಧೆಯಲ್ಲಿಯೂ ಪಾಲ್ಗೊಂಡು ಅಲ್ಲಿಯೂ ಮೊದಲ ಸ್ಥಾನ ಗಳಿಸಿ, ತಮ್ಮ ಯಶಸ್ಸು ಕಾಕತಾಳೀಯವಲ್ಲ ಎಂದು ನಿರೂಪಿಸಿದರು.

ಸೆದ್ದಿಗ್ ಡ್ರೈವಿಂಗ್ ಕಲಿತದ್ದು 13ನೇ ವಯಸ್ಸಿನಲ್ಲೇ. ಆರಂಭದಲ್ಲಿ ಲೈಸೆನ್ಸ್ ಇಲ್ಲದೆಯೇ ಗಾಡಿ ಓಡಿಸಿದರು. ವೇಗದ ಪರಿವೆ ಇಲ್ಲದೆ, ಅಡ್ಡಾದಿಡ್ಡಿಯಾಗಿಯೂ ಓಡಿಸಿದರು - ಅದಕ್ಕೆ ಬೆಲೆಯನ್ನೂ ತೆತ್ತರು. ಒಮ್ಮೆ ಕತ್ತು ಮುರಿಯಿತು ; ಮತ್ತೊಮ್ಮೆ ಆದ ಅಪಘಾತದಲ್ಲಿ ಕಾಲಿನೊಳಕ್ಕೆ ಲೋಹದ ತಗಡನ್ನು ತೂರಿಸಿದ್ದಾರೆ. ಈ ಅಪಘಾತಗಳಿಂದ ಆಕೆ ಭೀತಿಗೊಳ್ಳಲಿಲ್ಲ, ಬದಲಿಗೆ ಡ್ರೈವಿಂಗ್ ಚಾಕಚಕ್ಯತೆ ಕಲಿತರು. ಪುರುಷರ ಕ್ಷೇತ್ರಕ್ಕೆ ಸಂಬಂಧಿಸಿದ ಕೆಲಸಗಳನ್ನು ಮಾಡುವುದು, ಹಾಗೂ ಮಹಿಳೆಯರ ದೈಹಿಕ ಸಾಮರ್ಥ್ಯಕ್ಕೆ ಮೀರಿದ ಕೆಲಸಗಳನ್ನು ಮಾಡುವುದು ನನಗೆ ಬಹಳ ಇಷ್ಟ ಎನ್ನುವ ಆತ್ಮವಿಶ್ವಾಸ ಸೂಸುವ ಸೆದಿಗ್ ಪುರುಷರೊಡನೆ ಸ್ಪರ್ಧಿಸುವಂಥ ಸವಾಲುಗಳನ್ನು ಆನಂದಿಸುತ್ತಾರಂತೆ. ಇದು ಪುರುಷ ಸ್ಪರ್ಧಿಗಳಿಗೆ ಸಹಜವಾಗಿಯೇ ನುಂಗಲಾರದ ಸುತ್ತಾಗಿದೆ.

ಆದರೂ ಸೆದ್ದಿಗ್ ಪ್ರಕಾರ, ''ಇಲ್ಲಿ - ಇರಾನ್‌ನಲ್ಲಿ ಮಹಿಳೆಯರ ಮೇಲೆ ಬಹಳಷ್ಟು ನಿರ್ಬಂಧಗಳಿಲ್ಲ. ಸಮಾಜದಲ್ಲಿ ಮಹಿಳೆಯರು ಕಾಲೂರಿಲ್ಲ ಎಂದರೆ ಅದು ಅವರದೇ ತಪ್ಪು. ತಮ್ಮ ಹಕ್ಕುಗಳಿಗಾಗಿ ಒತ್ತಾಯಸದಿದ್ದರೆ, ಅವು ಸಿಗುವುದೇ ಇಲ್ಲ. ಇಲ್ಲಿ 'ಧರ್ಮ'ದ ಕಾರಣದಿಂದ ನಿರ್ಬಂಧಗಳಿವೆ, ನಿಜ. ಆದರೆ ಅದು ಬದಲಾವಣೆಯ ಗತಿಯನ್ನು ನಿಧಾನಗೊಳಿಸುತ್ತದೆಯೇ ಹೊರತು, ಬದಲಾವಣೆಯನ್ನೇ ಸ್ಥಗಿತಗೊಳಿಸದು.

ಮೋಟಾರ್ ರೇಸ್‌ನಲ್ಲಿ ಗಳಿಸಿದ ಜಯ ಸೆದಿಗ್‌ಗೆ ತೃಪ್ತಿ ತಂದಿದೆಯಾದರೂ, ಆಡಿಪಾಯ ವ್ಯವಸ್ಥೆಯ ಬಗ್ಗೆ ಕೆಲ ಅನುಮಾನಗಳಿವೆ. ರೇಸಿಂಗ್ ಪ್ರಶಸ್ತಿ ಸ್ವೀಕಾರಕ್ಕೆ ಮೊದಲು ಅವಳಿಗೆ ಇರಾನಿಯನ್ ಮೋಟಾರ್ ರೇಸಿಂಗ್ ಸಂಸ್ಥೆಯಿಂದ ಒಂದು ಪತ್ರ ಬಂದಿತು. ಅಥವಾ 'ಆದೇಶ' ಎಂದರೆ ಸೂಕ್ತವೇನೋ ! ವಿಜೇತರ ಸ್ಥಾನದಲ್ಲಿ ನಿಲ್ಲುವಾಗ, ಲಾಲೇ ಸೆದ್ದಿಗ್ ರೇಸಿಂಗ್ ದೇಸಿನ ಮೇಲೆ ಸಾಂಪ್ರದಾಯಿಕ ಉಡುಗೆ (ದೇಹವನ್ನು ಪೂರ್ತಿ ಮುಚ್ಚುವ ನಿಲುವಂಗಿ)ಯನ್ನು ತೊಡಬೇಕೆಂದೂ, ಇತರ ಪುರುಷ ಸ್ಪರ್ಧಿಗಳೊಡನೆ ಆಕೆ ಮಾತಾಡುವುದಾಗಲೀ, ನಗುವುದಾಗಲೀ ಮಾಡಬಾರದೆಂದು ಅದರಲ್ಲಿ ತಿಳಿಸಲಾಗಿತ್ತು.

ಈಗಾಗಲೇ ಹೇಳಿದಂತೆ, ತಮ್ಮ ಯಶಸ್ಸಿನಿಂದ ಸೆದಿಗ್ ಸಂತೃಪ್ತರಾಗಿದ್ದರೂ, ಪಾಶ್ಚಾತ್ಯ ಮಹಿಳೆಯರು ತಮ್ಮ ಸಮಾಜದಲ್ಲಿ ಹೊಂದಿರುವ ಹಕ್ಕು ಸ್ವಾತಂತ್ರ್ಯಗಳು ತಮಗಿಲ್ಲವಲ್ಲ ಎಂಬ ಕೊರಗಿದೆ. 'ನಾನೇನಾದರೂ ಬೇರೆ ಪರಿಸರದಲ್ಲಿದ್ದರೆ ಇನ್ನೂ ಹೆಚ್ಚಿನದನ್ನು ಸಾಧಿಸುತ್ತಿದ್ದೆ ಎಂದು ಬಲು ಸೂಕ್ಷ್ಮವಾಗಿ ಈ ಕೊರಗನ್ನು ಹೇಳಿಕೊಳ್ಳುತ್ತಾರೆ.

ಆದರೂ, ಕಟ್ಟಾವಾದಿಗಳ ರಾಷ್ಟ್ರದಲ್ಲಿ, ಪುರುಷ ಕ್ಷೇತ್ರವನ್ನು ಹೊಕ್ಕು, ಅವರನ್ನೇ ಬದಿಗೆ ತಳ್ಳಿ ಮುಂಚೂಣಿಯಲ್ಲಿ ನಿಲ್ಲುವುದು ಕಡಿಮೆ ಸಾಧನೆಯೇನಲ್ಲ!

*-ಹೆಚ್.ಎಸ್. ಗೀತಾ*

# ಫ್ರಾಗ್ಮೆಂಟ್ಸ್ ಆಫ್ ಎ ಲೈಫ್..... ಕಾಡಿ ಕಥನ

-ಗೀತಾ

'ಕಳೆದು ಹೋದ ಕಾಲಕ್ಕೆ ನೀಡಬೇಕಾದ ಗಮನವನ್ನು ನೀಡದಿದ್ದಲ್ಲಿ ಅದು ಅಶಾಂತಿಯಿಂದ ನಮ್ಮೊಳಗೇ ಹೊಯ್ದಾಡುತ್ತಿರುತ್ತದೆ' ಎನ್ನುತ್ತಾರೆ. ಮೈಥಿಲಿ ಶಿವರಾಮನ್ - 'ಫ್ರಾಗ್ಮೆಂಟ್ಸ್ ಆಫ್ ಎ ಲೈಫ್'ನ ಬರಹಗಾರ್ತಿ. 'ಟಿಪಿಕಲ್' ಪುರುಷ ಪ್ರಾಧಾನ್ಯ ಪದ್ಧತಿಯಿಂದ ಹೊರಬಂದು ಮಗಳನ್ನು ವಿದ್ಯಾವಂತೆಯಾಗಿ ಮಾಡುವುದಲ್ಲದೆ ತಾನೂ ಜ್ಞಾನಾರ್ಜನೆ ಮಾಡಿಕೊಂಡ ಓರ್ವ ಮಹಿಳೆ ಸುಬ್ಬಲಕ್ಷ್ಮಿಯ ಹತಾಶ ಪ್ರಯತ್ನಗಳನ್ನು ಆಕೆಯ ಬದುಕಿನ ತುಣುಕುಗಳನ್ನು ಲೇಖಕಿ ಬಹಳ ಸೊಗಸಾಗಿ ಈ ಕಾದಂಬರಿಯಲ್ಲಿ ನಿರೂಪಿಸಿದ್ದಾರೆ.

ಸಾಮಾಜಿಕ ಪರಿವರ್ತನೆ ಆಗುತ್ತಿರುವ ಈ ಹಾದಿಯಲ್ಲಿ ನಾವೆಲ್ಲ ನಿಂತಿದ್ದೇವೆಂಬುದನ್ನು ತಿಳಿಯಲು ಎಲ್ಲಾ ಭಾರತೀಯರೂ ಒಮ್ಮೆ ಹಿಂತಿರುಗಿ ನೋಡಬೇಕು ; ತಮ್ಮ ತಾಯಿ, ಅಜ್ಜಿ, ಮುತ್ತಜ್ಜಿಯರ ಜೀವನಗಳನ್ನು ಅವಲೋಕಿಸಬೇಕು, ಅಷ್ಟೆ ಅದೆ ತಾಯೋ, ಅಜ್ಜಿಯೋ, ಯಾರೋ ಆಗಿರಬಹುದು. ಒಟ್ಟಿನಲ್ಲಿ ಆರಂಭದಲ್ಲೇ ನಿಂತ ವಿದ್ಯಾಭ್ಯಾಸ ಅಥವಾ ತೊಟ್ಟಿಲಲ್ಲೇ ನಡೆದ ವಿವಾಹ ಬಾಲ್ಯದಲ್ಲೇ ಗಂಡನನ್ನು ಕಳೆದುಕೊಂಡವರು, ಕೇಶ ಮುಂಡನ ಮಾಡಿಸಿಕೊಂಡು 'ವಿಧವಾ ಪಟ್ಟ' ಕಟ್ಟಿಕೊಂಡು ಪಟ್ಟಿಯಿಂದಲೇ ಇಲ್ಲವಾದವರು. -ಇಂಥ ವ್ಯಕ್ತಿಗಳ ಘಟನೆಗಳು ಅನೇಕ ಕುಟುಂಬಗಳ ಅನುಭವಕ್ಕೆ ಬಂದಿವೆ, ನೆನಪಿನಲ್ಲಿ ಉಳಿದಿವೆ.

ಭಾರತೀಯ ಮಧ್ಯಮ ವರ್ಗದಲ್ಲಾಗಿರುವ ಚಮತ್ಕಾರಿಕ ಏಳಿಗೆಗೆ ಮೂಲಕಾರಣ ಕಳೆದ 75-100 ವರ್ಷಗಳಲ್ಲೂ ಮಹಿಳೆಯರಿಗೂ ವಿದ್ಯಾಭ್ಯಾಸದ ಅವಕಾಶ ಸಿಕ್ಕಿದ್ದೇ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಭಾರತದ ಎಲ್ಲಾ ಮಹಿಳೆಯರಿಗೆ ವಿದ್ಯಾಭ್ಯಾಸ ಸಿಗುವುದೇ ಆದರೆ, ಮಾನವ ಶಕ್ತಿ ಭಯಂಕರ ಪ್ರಮಾಣದಲ್ಲಿ ಪ್ರವಹಿಸುತ್ತದೆ ಎಂದು ಊಹಿಸದೇ ಇರುವುದು ನಿಜಕ್ಕೂ ಅಸಾಧ್ಯ.

'ಫ್ರಾಗ್ಮೆಂಟ್ಸ್ ಆಫ್ ಲೈಫ್'ನಲ್ಲಿ ಕತೆಗಾರ್ತಿ ಇಂದು ಕುಟುಂಬದ ಸಮಸ್ಯೆಗಳನ್ನು, ತೊಡಕಿನ ವ್ಯಕ್ತಿ - ವಿಷಯಗಳನ್ನು ಸುಮ್ಮನೆ ಓದುಗರಿಗೆ ಒದಗಿಸುತ್ತ ಹೋಗುವುದಿಲ್ಲ, ಆಕೆ ಜೀವನದ ವೃತ್ತಾಂತಗಳನ್ನು ಕೌಶಲ್ಯದಿಂದ, ವ್ಯವಸ್ಥಿತವಾಗಿ ನಮ್ಮ ಮುಂದಿಡುತ್ತಾರೆ. ಸುಬ್ಬಲಕ್ಷ್ಮಿಯ ವ್ಯಕ್ತಿತ್ವವನ್ನು ಪುನಃ ರೂಪಿಸಲಿಕ್ಕಾಗಿ ಲೈಬ್ರರಿಯ ರಸೀದಿಗಳು. ಕಾಂಗ್ರೆಸ್ ಪಕ್ಷದ ವಂತಿಗೆ ರಸೀದಿಗಳು, ಅತ್ಯಮೂಲ್ಯ ಪತ್ರಿಕೆಗಳು - ನಿಯತಕಾಲಿಕಗಳು ಪ್ರತಿಗಳು ಹಾಗೂ ಆಕೆಯ ಕೆಲವು 'ಆಸ್ತಿ'ಗಳನ್ನು ಬಹಳ ನಿಖರವಾಗಿ ಕಣ್ಣಲ್ಲಿ ಕಣ್ಣಿಟ್ಟು ಗಮನಿಸಲಾಗಿದೆ. ಇದು ಹೇಗಿದೆಯೆಂದರೆ ಪ್ರಾಚೀನ ವಸ್ತು ಸಂಶೋಧಕನೊಬ್ಬ ಪುರಾತನ ಮೂಳೆಗಳ ಮೇಲಿನ ಧೂಳು ಒರೆಸಿ, ಅವನ್ನು ಮತ್ತೆ ಜೋಡಿಸಿಡುವುದನ್ನು ನೋಡುವಂತಹ ಅನುಭವ.

ಸತ್ಯವನ್ನು ತಲುಪುವ ತವಕ ಒಂದೆಡೆ, ನಮ್ಮ ವರ್ತಮಾನಕ್ಕೆ ತಕ್ಕುದಾದ ಸಂದೇಶಗಳನ್ನು ಬಾಚಿಕೊಳ್ಳುವ ಹಪಾಪಿ ಇನ್ನೊಂದೆಡೆ, ಹಾಗೂ ಏನೆಲ್ಲಾ ವಿರೋಧಾಭಾಸಗಳಿದ್ದರೂ ಅವುಗಳೂ ಸೇರಿದಂತೆ ಭೂತಕಾಲವನ್ನು ಒಪ್ಪಿಕೊಳ್ಳುವ ಆತುರ ಮತ್ತೊಂದೆಡೆ - ಇಂತಹ ತ್ರಿವಿಧ ಸಂದಿಗ್ಧತೆಗಳು ಈ ಪುಸ್ತಕವನ್ನು ಒಂದು ಸಂಕೀರ್ಣ ಐತಿಹಾಸಿಕ ಹಾಗೂ ಸಾಹಿತ್ಯಕ ಕಥನವಾಗಿಸುತ್ತದೆ. ಈ ಪುಸ್ತಕವು ಒಂದು ಟೈಮ್ ಮಿಷೀನ್‌ನಂತೆ. ನಮ್ಮನ್ನು ಗತ ಕಾಲಕ್ಕೆ-ಲೋಕಕ್ಕೆ ಒಯ್ಯುತ್ತದೆ. ಇಂದು ನಾವು ಏನೇನು ಸಾಮಾಜಿಕ ಹಾಗೂ ರಾಜಕೀಯ ಬದಲಾವಣೆಗಳನ್ನು ಕಾಣುತ್ತೇವೆಯೋ, ಅದರ ಬೀಜಗಳನ್ನು 'ಅಲ್ಲಿ' ನಾವು ಕಾಣಬಹುದು. ಸಾಧನೆಯತ್ತ ಹೆಜ್ಜೆ ಹಾಕಿರುವ ಒಬ್ಬ ತನ್ನ ಜೀವನದಲ್ಲಿ ಸಾಧನೆಯತ್ತ ನಡೆಸಿದ ಪ್ರಯಾಣಕ್ಕೆ ಮನ ಕಲಕುವ ಸಾಕ್ಷ್ಯ ಒದಗಿಸುತ್ತದೆ.

**ಅಷ್ಟಕ್ಕೂ ಈ ಸುಬ್ಬಲಕ್ಷ್ಮಿ ಯಾರು ?**

ಸುಬ್ಬಲಕ್ಷ್ಮಿ ನೀಲಿ ಬಣ್ಣದ ತಗಡಿನ ಟ್ರಂಕಿನ ತುಂಬಾ ನೆನಪುಗಳನ್ನು ಇಟ್ಟು ಹೋದಾಕೆ, ಅದರಲ್ಲೊಂದು ಕಿರಿದಾದ ಡೈರಿ. ಅದರಲ್ಲಿ ಮಾನವೀಯ ಸಂಬಂಧಗಳ ಬಗ್ಗೆ ಮಾತೇ ಇಲ್ಲ, ಆದರೆ ಪಕ್ಷಿಗಳು, ಸೂರ್ಯಾಸ್ತಗಳು, ಗಿಡಮರಗಳು ಹಾಗೂ ನಕ್ಷತ್ರಗಳ ಬಗ್ಗೆ ವಿಸ್ತಾರ ಚಿತ್ರಣ. ಒಡವೆ ವಸ್ತ್ರಗಳನ್ನಾಗಲೀ, ಭಾವನೆಗಳನ್ನು ಬಹಿರಂಗವಾಗಿ ವ್ಯಕ್ತಪಡಿಸುವುದನ್ನಾಗಲೀ ಒಲ್ಲದ ಏಕಾಂಗಿ. ಜಾತೀಯತೆಗೆ 'ಮಾಡು-ಬೇಡ'ಗಳ ಪರಿಧಿಯ ಆಚೆಗೇ ನಿಂತಾಕೆ. ಪುರುಷ ದಬ್ಬಾಳಿಕೆಯನ್ನು ವಿರೋಧಿಸಿದಾಕೆ. ಮತೀಯ

ಪೂರ್ವಗ್ರಹಗಳನ್ನು ತಿರಸ್ಕರಿಸಿದಾಕೆ. ಎಂದೂ ಶಾಲೆಗೂ ಸಹ ಹೋಗದಾಕೆ, ತಾವಾಗಿಯೇ ಇಂಗ್ಲೀಷ್, ತಮಿಳು ಮತ್ತು ಸಂಸ್ಕೃತ ಕಲಿತಾಕೆ, ಅದೂ ಯಾರೊಬ್ಬರ ಮಾರ್ಗದರ್ಶನ ಇಲ್ಲದೆಯೇ.

ಅಂದಿನ ದಿನಗಳಲ್ಲಿ ಕೇವಲ ಕೆಲವೇ ಪುರುಷರು ತಮ್ಮ ಪತ್ನಿಯರಿಗೆ ಓದು-ಬರಹ ಕಲಿಸುವ ಪ್ರಯತ್ನ ಮಾಡುತ್ತಿದ್ದರು. ಸುಬ್ಬಲಕ್ಷ್ಮಿಯ ಪತಿ PRGಯೂ ಸಹ ಇದಕ್ಕೆ ಹೊರತಾಗಿರಲಿಲ್ಲ. ಸುಂದರವಾದ ಅಕ್ಷರಗಳಲ್ಲಿ ಆಕೆ ಬರೆದಿಟ್ಟ ಪುಸ್ತಕಗಳ ಪಟ್ಟಿ ವಿವಿಧ ವಿಷಯಗಳಲ್ಲಿ ಆಕೆಗಿದ್ದ ಆಸಕ್ತಿಯನ್ನು ತೋರುತ್ತಿತ್ತು. ಆ ವಿಷಯಗಳಾದರೂ ಎಂಥವು.....? ಕಾರ್ಲ್‌ಮಾರ್ಕ್ಸ್, ಟಾಲ್‌ಸ್ಟಾಯ್, ತಮಿಳಿನ ಪುರಾಣ ಗ್ರಂಥಗಳು, ವಂದನಾರ್ ಚರಿತ್ರಂ, ಮ್ಯಾಕ್ಸ್‌ಮುಲ್ಲರ್, ಬೌದ್ಧ ಧರ್ಮ, ಮಹರ್ಷಿ ಅರವಿಂದರು, ಸುಬ್ರಹ್ಮಣ್ಯ ಭಾರತಿ ; ಅಷ್ಟೇ ಅಲ್ಲ, ಬ್ರಿಟಿಷ್ ವಿರೋಧಿ ಜನಪರ ಗೀತೆಗಳು.

ವಿಜ್ಞಾನದ ಬಗ್ಗೆ ಆಕೆಗೆ ಇದ್ದ ಕುತೂಹಲ ಫ್ರಾಯ್ಡನ ಮನೋವಿಶ್ಲೇಷಣೆ, ಐನ್‌ಸ್ಟೀನನ ಭೌತಶಾಸ್ತ್ರ ಹಾಗೂ ಹಕ್ಸ್ಲೀಯ ಜೀವ ವಿಕಾಸ ಶಾಸ್ತ್ರವನ್ನೂ ಬಿಡಲಿಲ್ಲ. ಅತ್ತ ಭಾರತದ ಸ್ವಾತಂತ್ರ್ಯ ಚಳುವಳಿಯ ಉತ್ಕಟೇಚ್ಛೆ ಆಕೆಯಲ್ಲೂ ಪ್ರತಿಧ್ವನಿಸಿತು.

ಈ ವಿಶಿಷ್ಟ ವ್ಯಕ್ತಿತ್ವದ ಮಹಿಳೆಗೆ ತನ್ನನ್ನೂ ದಕ್ಷಿಣ ಆಫ್ರಿಕಾದ ತಮಿಳು ಕೂಲಿಗಳ ನಡುವೆ ಹಾಗೂ ಕೇರಳದ ಬಂಡುಕೋರ ಮಾಪಿಳ್ಳೆಗಳ ನಡುವೆ ಬಗೆದಂತೆ ಆಗಾಗ ಕನಸು ಬೀಳುತ್ತಿತ್ತೆಂದು ನಮಗೆ ತಿಳಿದು ಬರುತ್ತದೆ. ಆಕೆಯಿದ್ದ ಶತಮಾನವನ್ನು ಪುನಃ ರೂಪಿಸುತ್ತಿದ್ದ ಅಂದಿನ ಕ್ರಾಂತಿಕಾರಿ ಸಿದ್ಧಾಂತಗಳು ಆಕೆಯನ್ನು 'ಎಡ್ಗರ್ ಸ್ನೋ'ನ 'ರೆಡ್‌ಸ್ಟಾರ್ ಓವರ್ ಚೈನಾ' ದತ್ತ ತಲುಪಿಸಿತು. ಆಕೆಯ ಸಮಕಾಲೀನ ಮಹಿಳೆಯರಲ್ಲಿ ಇದ್ದಿರಬಹುದಾದ ಸಾಮಾನ್ಯ ಕೆಲಸ ಕಾರ್ಯಗಳ್ಯಾವುವೂ ಆಕೆಗೆ ಆಸಕ್ತಿಕರವಾಗಿ ತೋರಲಿಲ್ಲ. ಮದುವೆಯಾದದ್ದು 11 ವರ್ಷಕ್ಕೆ. ಹದಿವಯಸ್ಸಿನಲ್ಲೇ ಎರಡು ಕೂಸು ಹುಟ್ಟಿದವು - ಸತ್ತವು - ಹೃದಯ ಒಡೆಯಿತು. ಅಪಸ್ಮಾರ ಹಾಗೂ ಅಸ್ತಮಾಗಳ ಜಂಟಿ ದಾಳಿ. ಯಾವುದೇ ದೈಹಿಕ ಶ್ರಮ ತಾಳಲಾರದಷ್ಟು ದೇಹ ಜರ್ಜರಿತವಾಯಿತು. ಜೊತೆಗೆ ಸೋತು ಸೊರಗಿದ ವೈವಾಹಿಕ ಸಂಬಂಧ. ಆದರೂ ಆಕೆ, ಕದ್ದು ಹೊರಹೋಗಿ, ವೇಲ್ಸ್ ರಾಜಕುಮಾರನ ಭಾರತ ಭೇಟಿ ಸಂದರ್ಭದಲ್ಲಿ ಕಪ್ಪು ಬಾವುಟ ಪ್ರದರ್ಶಿಸಿ ಬಂದರು. ಲೈಬ್ರರಿಯಿಂದ ಪುಸ್ತಕ ಒಯ್ಯುವುದು, ಕೆಲ ಕಲಾಪ್ರದರ್ಶನಗಳಿಗೆ ಹೋಗುವುದು, ಆಪ್ತ ಗೆಳತಿ ಗ್ರೇಸ್‌ಗೆ ಪತ್ರ ಬರೆಯುವುದು - ಎಲ್ಲವೂ ಒಂದು ಸವಿಸ್ತಾರ ಕಥನ. ಯಾವುದನ್ನೂ ಹಗುರವಾಗಿ ತೆಗೆದುಕೊಳ್ಳುವಂತೆಯೇ ಇಲ್ಲ.

ಇದು ಸಂಪೂರ್ಣವಾಗಿ ಓದಿಸಿಕೊಂಡು ಹೋಗುವ ಕೃತಿ. ನವಜಾತ ಹೆಣ್ಣು ಶಿಶು ತಿರುವಾಂಕೂರಿನ ಕಾಲೇಜಿಗೆ ಹೋಗುವ ಕನಸು ಕಾಣುವ ತಂದೆ, ಮಗುವನ್ನು ಶಾಲೆಗೂ ಕಳಿಸದಿರುವುದು, ಕೆಲವು ಅಸಂಬದ್ಧ ಬ್ರಾಹ್ಮಣ ಪದ್ಧತಿಗಳೇ ತನ್ನ ಗಂಡನ ಸಾವಿಗೆ ಕಾರಣವಾದುವೆಂದು 'ವಿಧವೆ'ಯು ಗುರುತಿಸುವುದು, ಬಾಲ್ಯ ವಿವಾಹ ಪದ್ಧತಿಯನ್ನು ರದ್ದು ಮಾಡುವ ಕಾನೂನು ಜಾರಿಗೆ ಬರುವ ಮುನ್ನ ತಮ್ಮ ಹೆಣ್ಣು ಮಕ್ಕಳನ್ನು ಮದುವೆ ಮಾಡಿ ಸಾಗ ಹಾಕುವ ಹರಪ್ರಯತ್ನ ನಡೆಸುವ ತಂದೆ-ತಾಯಂದಿರು, ಲೈಂಗಿಕತೆಗೆ ಬಾಲವಧು ಪ್ರತಿಕ್ರಿಯಿಸುವ ರೀತಿ, ಆಕೆ 14ನೇ ವಯಸ್ಸಿಗೆ ತಾಯಿಯಾದದ್ದು..., ಗರ್ಭಾಶಯದ ತೊಂದರೆಯಿಂದ ನರಳಿದಾಗ, ಆಕೆಯನ್ನು ಒಂಟಿಯಾಗಿ ಎರಡು ತಿಂಗಳ ಕಾಲ ಆಸ್ಪತ್ರೆಯಲ್ಲೇ ಬಿಟ್ಟಿದ್ದು.... ಓದುಗರು ತನ್ಮಯತೆಯಿಂದ ಪುಟ ತಿರುವುತ್ತ, ಓದುತ್ತಲೇ ಹೋಗುತ್ತಾರೆ. ಕೊನೆಯ ಪುಟಕ್ಕೆ ಬರುವವರೆಗೆ.

ಕೊನೆಯ ಅಧ್ಯಾಯವು ಪಿತೃಪ್ರಧಾನ ವ್ಯವಸ್ಥೆಯು ಪುರುಷ-ಮಹಿಳೆಯರಿಬ್ಬರಿಗೂ ನೀಡುವ ಮಾನಸಿಕ ಯಾತನೆ ಬಗ್ಗೆ ಬೆಳಕು ಚೆಲ್ಲುತ್ತದೆ. ಇದಕ್ಕೆ ಕಾರಣ ಅಂದಿನ ಸಾಮಾಜಿಕ ಸನ್ನಿವೇಶ ಎಂದು ಬರಹಗಾರ್ತಿ ಹೇಳುತ್ತಾರೆ. ಕೊನೆಯಲ್ಲಿ ಸುಬ್ಬಲಕ್ಷ್ಮಿ ಮಾನಸಿಕವಾಗಿ ಕುಸಿಯುತ್ತಾರೆ.

ಕಾದಂಬರಿಯ ವ್ಯಕ್ತಿಗಳನ್ನು, ಇಂದಿನ ಮಾಪಕಗಳನ್ನಿಟ್ಟುಕೊಂಡು ಅಳೆಯಬಾರದು, ನಿಜ. ಆದರೆ ವೈಯಕ್ತಿಕ ಜವಾಬ್ದಾರಿ ಎನ್ನುವುದು ಎಲ್ಲಾ ಕಾಲಕ್ಕೂ ಒಂದೇ ಅಲ್ಲವೇ ಎಂಬ ಪ್ರಶ್ನೆ ಮೂಡುತ್ತದೆ. ಕೇವಲ ಕಲಹದಿಂದಲೇ ಬೆಸೆದಿರುವ ಗಂಡು ಹೆಂಡಿರ ನಂಟಿಗೆ ಮುಲಾಮು ಹಚ್ಚುವುದು ಸಾಧ್ಯವೇ? ಗಂಡ ಹೆಂಡಿನ ಪ್ರೇಮ-ಪ್ರೀತಿ ವಿಫಲವಾದರೆ ಏನಾಗುತ್ತದೆ ಎಂಬುದಕ್ಕೆ ಸಾಕ್ಷ್ಯಾಧಾರಗಳ ಕೊರತೆಯೇನಿಲ್ಲ, ಏಕೆಂದರೆ ನೀಲಿ ಬಣ್ಣದ ತಗಡಿನ ಟ್ರಂಕುಗಳಿಗೂ ನಮ್ಮಲ್ಲಿ ಬರವೇನಿಲ್ಲ.

ಬಟ್ಟೆಯ ತುಂಡುಗಳನ್ನು ಜೋಡಿಸಿ ಎಂಥಾ ಚಂದದ ಕೌದಿ ಹೊಲಿಯುತ್ತಾರಲ್ಲವೇ? ಅದೇ ರೀತಿ ಬದುಕಿನ ತುಣುಕುಗಳು ಇಲ್ಲಿ ಸುಂದರ ಕಾದಂಬರಿಯಾಗಿದೆ. ◻◻

# ನಾಜಿ ಜರ್ಮನಿಯಲ್ಲಿ ಮಹಿಳಾ ಪ್ರತಿಭಟನೆ.....

-ನೇಮಿಚಂದ್ರ

ಏಪ್ರಿಲ್ 30, 1945, ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡ. ಅರವತ್ತು ಲಕ್ಷ ಯಹೂದಿಗಳನ್ನು ಅಸಂಖ್ಯಾತ ಕಮ್ಯುನಿಸ್ಟರನ್ನು ಅಂಗವಿಕಲರನ್ನು ದಾರುಣವಾಗಿ ಕೊಂದು ಮುಗಿಸಿದ, ಸರ್ವಾಧಿಕಾರದಿಂದ ಮೆರೆದ ಹಿಟ್ಲರನ ಇತಿಹಾಸ ಕೊನೆಗೊಂಡು, ಚರಿತ್ರೆಯ ರಕ್ತಸಿಕ್ತ ಅಧ್ಯಾಯ ಮುಗಿದ ವರ್ಷ. ಇದು ಓರ್ವ ಹಿಟ್ಲರನ ತಲೆಕೆಟ್ಟ ನೀತಿಯಿಂದ ಸಂಭವಿಸಿದ ಚರಿತ್ರೆಯ ದುರಂತವಾಗಿರಲಿಲ್ಲ. ಅತ್ಯಂತ ಯೋಜಿತವಾಗಿ, ವ್ಯವಸ್ಥಿತವಾಗಿ ನಡೆದ ಕೊಲೆಗಳವು.

ಹಿಟ್ಲರನ ಜೊತೆಯಲ್ಲಿ ವಿಜ್ಞಾನಿಗಳಿದ್ದರು, ಉದ್ಯಮಿಗಳಿದ್ದರು, ಜನಸಾಮಾನ್ಯರಿದ್ದರು, ಬಹುಸಂಖ್ಯಾತರಿದ್ದರು. ತಮ್ಮ ಸಂಶೋಧನೆಗೆ ಸುಲಭವಾಗಿ 'ಪ್ರಯೋಗ ಪಶುಗಳು' ಸಿಕ್ಕರೆಂದು ಸಂತಸಪಟ್ಟ ವಿಜ್ಞಾನಿಗಳು. ನಾಜಿ ಕ್ಯಾಂಪ್‌ಗಳಿಂದ ಯಹೂದೀಯರ ತಲೆಬುರುಡೆಗಳನ್ನು ತರಿಸಿಕೊಂಡು ಹೇಗಾದರೂ ತಮ್ಮ 'ಆರ್ಯ' ಜನಾಂಗದ ಶ್ರೇಷ್ಠತೆಯನ್ನು ಸಾಬೀತು ಮಾಡುವ ಉತ್ಸಾಹದ ವಿಜ್ಞಾನಿಗಳು. ತಮ್ಮ ಉದ್ಯಮಕ್ಕೆ ಪುಕ್ಕಟ್ಟೆಯಾಗಿ 'ಬಳಸಿ ಬಿಸಾಡಬಲ್ಲ' ಗುಲಾಮ ಕಾರ್ಮಿಕರು ಸಿಕ್ಕರೆಂದು ಲಾಭಕೋರತನವನ್ನು ಮೆರೆದ ಜರ್ಮನಿಯ ದೊಡ್ಡ ದೊಡ್ಡ ಉದ್ಯಮಗಳು. ದೇಶ ಬಿಟ್ಟು ಓಡಿ ಹೋಗುತ್ತಿರುವ, ಸಾವಿನ ಕೂಪಗಳಿಗೆ ಓಡಿಸುತ್ತಿರುವ ಯಹೂದಿಯರ ಮನೆ ಮಠಗಳಿಂದ ದಿನವೂ ಮಾರುಕಟ್ಟೆಗೆ ಬಂದು ಬೀಳುತ್ತಿರುವ ಸುಲಭ ಬೆಲೆಯ ವಸ್ತುಗಳನ್ನು, ಮುಗಿಬಿದ್ದು ಕೊಂಡುಕೊಂಡ ಜನಸಾಮಾನ್ಯರ ಕೊಳ್ಳುಬಾಕತನವೂ ಇಲ್ಲಿ ಸೇರಿತ್ತು. ಇದರಾಚೆಗೆ ನಿಂತು ನೋಡಿದ ಜನರಿದ್ದರು, ನಿಂತು ನೋಡಿದ ದೇಶವಿತ್ತು. 'ಕೆಲವರಾದರು ವಿರೋಧಿಸಿದರಲ್ಲವೆ' ಎಂಬುದು ನಿಜವಾದರೂ ಅವರ ಸಂಖ್ಯೆ ಅತಿ ಸಣ್ಣದಿತ್ತು. ಹಿಟ್ಲರನ ವಿರುದ್ಧ ಸಾರ್ವಜನಿಕವಾಗಿ ಪ್ರತಿಭಟನೆಗಳು ನಡೆಯಲಿಲ್ಲವೆ, ಎಂಬ ಕುತೂಹಲದ ಪ್ರಶ್ನೆಗೆ ಒಂದೇ ಒಂದು ಉತ್ತರವಿದೆ, ಹಿಟ್ಲರನ ವಿರುದ್ಧ ನಡೆದ ಒಂದೇ ಒಂದು ಸಾರ್ವಜನಿಕ ಪ್ರತಿಭಟನೆ - ಮಹಿಳೆಯರದಾಗಿತ್ತು !

ಬಹು ಸಂಖ್ಯಾತ ಜನರು ಹಿಟ್ಲರನ ಸರ್ವಾಧಿಕಾರದ ಎದುರು ನಿಂತು ವಿರೋಧಿಸುವುದು, ಪ್ರತಿಭಟಿಸುವುದು ಅಸಾಧ್ಯ ಎಂದೇ ಭಾವಿಸಿದ್ದರು. ಹೀಗಿದ್ದೂ 1943ರಲ್ಲಿ ಒಂದು ಗುಂಪು ಮಹಿಳೆಯರು ಬೀದಿಗಳಿದು ಪ್ರತಿಭಟಿಸಿದರು ಮಾತ್ರವಲ್ಲ, ತಮ್ಮ ಬೇಡಿಕೆಯನ್ನು ಪಡೆಯುವಲ್ಲಿ ಯಶಸ್ವಿಯಾದರು !

1943ರ ಫೆಬ್ರವರಿ ತಿಂಗಳು, ಬರ್ಲಿನ್‌ನಲ್ಲಿ ಇನ್ನೂ ಕೆಲವು ಯಹೂದಿಗಳು ಉಳಿದಿದ್ದರು, ಅವರು ಜರ್ಮನಿಯ 'ಆರ್ಯ' ಮಹಿಳೆಯರನ್ನು ವಿವಾಹವಾದ ಯಹೂದಿಗಳು. ಆದರೆ ಫೆಬ್ರವರಿ ತಿಂಗಳಿನಲ್ಲಿ, ಮನೆ ಮನೆಗೆ, ಕಾರ್ಖಾನೆಗಳಿಗೆ ನುಗ್ಗಿ, ಅಳಿದುಳಿದ ಈ ಎಲ್ಲ ಯಹೂದಿಗಳನ್ನು ಸಾಮೂಹಿಕವಾಗಿ ಬಂಧಿಸಿ, ಇವರನ್ನು ಆಶ್ವಿಟ್ಸ್‌ನ ಗ್ಯಾಸ್ ಛೇಂಬರ್‌ಗೆ ಕಳುಹಿಸುವ ವ್ಯವಸ್ಥೆ ಸಿದ್ಧವಾಯಿತು. ಸುಮಾರು 2000 ಸಂಖ್ಯೆಯಲ್ಲಿದ್ದ ಈ ಯಹೂದಿಗಳನ್ನು ರೋಸನ್ ರಸ್ತೆಯ ಯಹೂದಿ ಸಮುದಾಯ ಭವನದಲ್ಲಿ ಕೂಡಿ ಹಾಕಲಾಗಿತ್ತು.

ವಿಷಯ ತಿಳಿಯುತ್ತಲೆ, ಇವರ ಹೆಂಡತಿಯರು- ಕೆಲವರು ಏಕಾಂಗಿಗಳಾಗಿ, ಕೆಲವರು ಜೊತೆಜೊತೆಯಾಗಿ- ರೋಸನ್ ಬೀದಿಗೆ ಓಡಿದರು. ಅಲ್ಲಿ ತಮ್ಮಂತೆಯೇ ಬಂದಿಳಿದ ಇತರ ಮಹಿಳೆಯರನ್ನು ಕಂಡರು. ಏಕಾಏಕಿ ಈ ಮಹಿಳೆಯರು ಬೀದಿಗಿಳಿದು ಪ್ರತಿಭಟಿಸಿದರು. ದೊಡ್ಡ ಸಂಖ್ಯೆಯಲ್ಲಿ ಅಲ್ಲಿಗೆ ಬಂದಿಳಿದ ಮಹಿಳೆಯರು 'ನಮ್ಮ ಗಂಡಂದಿರನ್ನು ಹಿಂತಿರುಗಿಸಿ' ಎಂದು ಕೂಗಿಟ್ಟರು. ಹಗಲು, ರಾತ್ರಿ ಎನ್ನದೆ ತಮ್ಮ ಪ್ರತಿಭಟನೆಯನ್ನು ಮುಂದುವರೆಸಿದರು. ದಿನೇ ದಿನೇ ಪ್ರತಿಭಟಿಸುವ ಮಹಿಳೆಯರ ಸಂಖ್ಯೆ ಹೆಚ್ಚಾಯಿತು. ಮೊದಲ ದಿನ ಅಲ್ಲಿ ಸೇರಿದವರು 600 ಮಹಿಳೆಯರು, ವಾರದಲ್ಲಿ ಪ್ರತಿಭಟಿಸುವ ಮಹಿಳೆಯರ ಸಂಖ್ಯೆ 6000ಕ್ಕೆ ಏರಿತ್ತು. ಮತ್ತೆ ಮತ್ತೆ 'ಗುಂಡಿಕ್ಕಿ ಕೊಲ್ಲುವ' ಬೆದರಿಕೆ ಹಾಕಿ ಏರಿದ ಬಂದೂಕಗಳಿದ್ದವು. ಮತ್ತೆ ಮತ್ತೆ ಎಸ್.ಎಸ್. ಗಾರ್ಡ್‌ಗಳು ಅವರನ್ನು ಚದುರಿಸಿದರು. ಮತ್ತೆ ಮತ್ತೆ ಇನ್ನಷ್ಟು ಸಂಖ್ಯೆಯಲ್ಲಿ ಮಹಿಳೆಯರು ಬಂದು ನಿಂತರು.

ಇವರು ಸಾಧಾರಣ ಮಹಿಳೆಯರು, ಇವರಲ್ಲಿ ಮುಖಂಡರಿರಲಿಲ್ಲ, ಅವರಲ್ಲಿ ಆಯುಧಗಳಿರಲಿಲ್ಲ, ಯೋಜಿತವಾಗಿ ನಡೆಸಿದ ಪ್ರತಿಭಟನೆಯೂ ಇದಲ್ಲ. ನಾಜಿ ವಿರುದ್ಧ ಎದೆ ಕೊಟ್ಟು ನಿಲ್ಲುವುದು, ಸಾರ್ವಜನಿಕವಾಗಿ ನಾಜಿ ವಿರುದ್ಧ ಕೂಗಿಡುವುದು ಅತ್ಯಂತ ಅಪಾಯಕಾರಿ ವರ್ತನೆಯಾಗಿದ್ದ ಕಾಲವದು. ಅವರ ಬಂಧನ ಖಚಿತವಿತ್ತು. ರೋಸನ್ ರಸ್ತೆಯ ಪ್ರತಿಭಟನೆಯಲ್ಲಿ ಭಾಗವಹಿಸಿದ ಚಾರ್ಲೆಟ್ ಇಸ್ರೇಲ್ ಆ ದಿನಗಳನ್ನು ನೆನಪಿಸಿಕೊಂಡಿದ್ದಾರೆ- 'ಯಾವುದೇ ಸೂಚನೆ ನೀಡದೆ, ಗಾರ್ಡ್‌ಗಳು ಮಷಿನ್ ಗನ್‌ಗಳನ್ನು ತಂದು ನಿಲ್ಲಿಸಿದರು. ನಮ್ಮತ್ತ ಗುರಿಯಿಟ್ಟು 'ನೀವು ಈಗ ಹೋಗದಿದ್ದರೆ, ಗುಂಡು ಹಾರಿಸುತ್ತೇವೆ' ಗುಡುಗಿದರು. ಗುಂಪು ಒಂದಿಷ್ಟು ಹಿಂದೆ ಸರಿಯಿತು, ಮರುಕ್ಷಣ 'ಹೇಗಿದ್ದರೂ ಅವರು ನಮ್ಮನ್ನು ಗುಂಡಿಕ್ಕಿ ಕೊಲ್ಲುತ್ತಾರೆ, ಮೌನವಾಗಿ ಸಾಯುವುದೇನು' ಎಂದು ನಮ್ಮ ಕಂಠ

ಹರಿದುಕೊಂಡು ಚೀರಿಟ್ಟೆವು 'ಪಾತಕಿಯರೆ, ಕೊಲೆಪಾತಕಿಯರೆ'. ನಮ್ಮ ಕೂಗು ಮುಗಿಲು ಮುಟ್ಟಿತು'.

'ಇಲ್ಲಿಂದ ತೊಲಗಿ, ಇಲ್ಲ ಎಂದರೆ ಗುಂಡು ಹಾರಿಸುತ್ತೇವೆ' ಎಸ್.ಎಸ್. ಗಾರ್ಡ್‌ಗಳು ಅನೇಕ ಬಾರಿ ಕೂಗಿಟ್ಟಾಗೆಲ್ಲ, ಈ ಮಹಿಳೆಯರು ಓಡಿ ಗಲ್ಲಿ ಗಲ್ಲಿಗಳಲ್ಲಿ ಸಂದಿಗೊಂದಿಗಳಲ್ಲಿ ಅವಿತಿಟ್ಟುಕೊಂಡರೂ, ಕೆಲವೇ ನಿಮಿಷಗಳಲ್ಲಿ ಮತ್ತೆ ಬಂದು ನಿಂತು ಗಟ್ಟಿ ಗಂಟಲಲ್ಲಿ ಪ್ರತಿಭಟನೆ ಆರಂಭಿಸುತ್ತಿದ್ದರು. ಅವರನ್ನು ಚದುರಿಸಿದಷ್ಟೂ ಮತ್ತೆ ಮತ್ತೆ ಜೊತೆಯಾಗಿ ಬಂದು ನಿಂತು ಸಾಮೂಹಿಕವಾಗಿ ಹೋರಾಡಿದರು. ಅವರ ದೂರು, ಕೂಗು, ಗದ್ದಲ ದೂರ ದೂರಕ್ಕೆ ಕೇಳಿ ಬರುತ್ತಿತ್ತು. ಹೀಗೆ ಪ್ರತಿಭಟಿಸುವುದು ಸುಲಭವಿರಲಿಲ್ಲ, ಸಾವು ಖಚಿತವಿತ್ತು ಆದರೆ ಈ ಮಹಿಳೆಯರು ಸಾಮೂಹಿಕವಾಗಿ ಸಾವನ್ನು ಎದುರಿಸಲೂ ಸಿದ್ಧವಾಗಿದ್ದರು.

ಅಲ್ಲಿದ್ದ ಮಹಿಳೆಯರೆಲ್ಲರ ಗಂಡಂದಿರೂ ಬಂಧಿತರಾಗಿರಲಿಲ್ಲ. ರೋಸನ್ ರಸ್ತೆಯಲ್ಲಿ ಬಂದು ಸೇರಿದ ಮಹಿಳೆಯ ಸಂಖ್ಯೆ ದಿನೇ ದಿನೇ ಹೆಚ್ಚುತ್ತಾ ಹೋಯಿತು. ಸತತವಾಗಿ ಬಿಡದೆ ಮುಂದುವರೆದ ಮಹಿಳೆಯರ ಪ್ರತಿಭಟನೆ ಇಡೀ ಬರ್ಲಿನ್‌ನಲ್ಲಿ ಸುದ್ದಿಯಾಗಿದ್ದು ಮಾತ್ರವಲ್ಲದೆ, ಬಿ.ಬಿ.ಸಿ.ಯಲ್ಲಿಯೂ ಬಿತ್ತರವಾಯಿತು. 'ಇಗೋ ಈ ಕ್ಷಣ ತಮ್ಮ ಎದೆಗೆ ಗುಂಡಿನ ಸುರಿ ಮಳೆ' ಎಂದು ಕಾದ ಮಹಿಳೆಯರಿಗೆ ಅಚ್ಚರಿ ಕಾದಿತ್ತು. ಯಹೂದೀ ಗಂಡಂದಿರನ್ನು ಬಿಡುಗಡೆ ಮಾಡಲಾಯಿತು. ತಮ್ಮ ಪತಿಯ ಜೀವಕ್ಕಾಗಿ ತಮ್ಮ ಪ್ರಾಣವನ್ನು ಪಣವಿಟ್ಟು ನಿಂತ ಈ ಮಹಿಳೆಯರ ಎದುರು ಆ ಒಂದು ಕ್ಷಣಕ್ಕಾದರೂ ನಾಜಿ ಸೇನೆ ಬಾಗಿತ್ತು. 'ಸದ್ಯಕ್ಕೆ ಬಿಟ್ಟುಬಿಡೋಣ, ಮತ್ತೊಮ್ಮೆ ಎಲ್ಲರನ್ನು ಹಿಡಿದು, ಸಾವಿನ ಕ್ಯಾಂಪಿಗೆ ಸಾಗಿಸಿದರಾಯಿತು' ಎಂದು ಅಂದು ಬಿಡುಗಡೆ ಮಾಡಲಾದ ಆ ಯಹೂದಿಗಳು 'ಹಿಟ್ಲರನ ಯುದ್ಧ'ದಲ್ಲಿ ಬದುಕುಳಿದರು !

ನಿಜಕ್ಕೂ ಈ ಮಹಿಳೆಯರು ಯಾರು ? ಯಹೂದೀ ಜನಾಂಗದ ಕಗ್ಗೊಲೆಗಳನ್ನು ನಿಲ್ಲಿಸಲು ಸಾಧ್ಯವಿತ್ತೆ ? ನಾಜಿಗಳೂ ಜನರ ಅಭಿಪ್ರಾಯಕ್ಕೆ ಬೆಲೆ ಕೊಡುತ್ತಿದ್ದರು ಎಂಬುದನ್ನು ಈ ಪ್ರತಿಭಟನೆ ಸೂಚಿಸಲಿಲ್ಲವೆ. ಅಗಾಧ ಸಂಖ್ಯೆಯಲ್ಲಿ ಜನರು ಪ್ರತಿಭಟಿಸಿದ್ದರೆ, ಚರಿತ್ರೆಯೇ ಬೇರೆಯಾಗುತ್ತಿತ್ತೆ ? ಅಂತಹ ಪ್ರತಿಭಟನೆ ನಡೆಯದಿದ್ದದ್ದು ಕೇವಲ ಭೀತಿಯಿಂದಲೇ, ಅಥವಾ ಅವರ ಎದೆಯಲ್ಲಿಯೂ ದಟ್ಟವಾಗಿ ಹಬೆಯಾಡಿದ ಜನಾಂಗೀಯ ದ್ವೇಷದಿಂದಲೇ ? ಬಹುತೇಕ ಜರ್ಮನ್ ಜನರ ಎದೆಯಲ್ಲಿ ಅವಿತಿದ್ದ ಯಹೂದಿ ವಿರೋಧಿ ಮನೋಭಾವ 'ಹೊಲೋಕಾಸ್ಟ್' ಅನ್ನು ಸುಲಭ ಸಾಧ್ಯವಾಗಿಸಿತ್ತೆ ? ತನ್ನ ಆಳುವವರ ದುರಾಚಾರಗಳೆದುರು, ನಿಲ್ಲ ಹೊರಡುವ ಜನತೆಗೆ ಈ ಸಾಧಾರಣ ಮಹಿಳೆಯರ ಅಸಾಧಾರಣ ಸಂದರ್ಭದ ಪ್ರತಿಭಟನೆ ಏನು ಕಲಿಸಬಹುದು?

ಈ ಪ್ರತಿಭಟನೆಯಲ್ಲಿ ಪಾಲ್ಗೊಂಡ ಮತ್ತೊಬ್ಬ ಮಹಿಳೆ ಎಲ್ಸಾ ಹೋಲ್ಜರ್ ಹೇಳಿದ್ದಾರೆ - 'ನಮ್ಮಿಂದೇನಾಗಬಲ್ಲದು, ಕೇವಲ ಕೆಲವು ಮಹಿಳೆಯರು ನಾಜಿಯ ವಿರುದ್ಧ ನಿಲ್ಲಲು ಹೇಗೆ ಸಾಧ್ಯ ? ಎಂದು ಯೋಚಿಸಲು, ಚಿಂತಿಸಲು ನಾವು ಹೋಗಲೇ ಇಲ್ಲ, ನಮ್ಮ ಹೃದಯದಿಂದ ನೇರ ಹೊರಬಿದ್ದ ಹೋರಾಟ ಇದಾಗಿತ್ತು'.

ರೋಸನ್ ರಸ್ತೆಯ ಈ ಪ್ರತಿಭಟನೆ ನಾಜಿ ಕರಾಳ ದಿನಗಳಲ್ಲಿ ಹೊತ್ತಿದ್ದ ಸಣ್ಣ ಹಣತೆ. 'ಇದರಿಂದ ಉದಾಹರಣೆ ತೆಗೆದುಕೊಂಡು ಇಡೀ ಜರ್ಮನ್ ಜನತೆ ಸಾಮೂಹಿಕ ಅಸಹಕಾರ ಚಳುವಳಿಯನ್ನು ಆರಂಭಿಸಬಹುದಿತ್ತು' ಎಂದು ಅನೇಕ ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಆದರೆ ಮಹಿಳೆಯರ ಈ ಉದಾಹರಣೆ ನಾಜಿ ದಿನಗಳ ಏಕೈಕ ಪ್ರತಿಭಟನೆಯಾಗಿ ಉಳಿಯಿತು. ಇತ್ತೀಚಿನ ದಿನಗಳವರೆಗೂ ಚರಿತ್ರೆಯ ಪುಟಗಳಲ್ಲಿ ಮಸುಕಾಗಿ ಹೋಗಿದ್ದ ಘಟನೆ, ಇದೀಗ ಜನರ ಗಮನ ಸೆಳೆಯುತ್ತಿದೆ.

ಆ ಪ್ರತಿಭಟನೆಯಲ್ಲಿ ಪಾಲ್ಗೊಂಡ ಕೆಲವು ಮಹಿಳೆಯರು ಇಂದಿಗೂ ಜೀವಂತವಿದ್ದಾರೆ. ಅವರ ನೆನಪುಗಳನ್ನು ನಾಥನ್ ಎಂಬ ಹೊಲೋಕಾಸ್ಟ್ ವಿಷಯಗಳನ್ನು ಆಳವಾಗಿ ಅಧ್ಯಯನ ಮಾಡಿರುವ ಲೇಖಕ ಹಿಡಿದಿಟ್ಟಿದ್ದಾರೆ. 'ರೆಸಿಸ್ಟೆನ್ಸ್ ಫ್ರಮ್ ದಿ ಹಾರ್ಟ್' ಎಂಬ ಪುಸ್ತಕದಲ್ಲಿ. ಇದೇ ಹೆಸರಿನ ಡಾಕ್ಯುಮೆಂಟರಿ ಚಿತ್ರ ಕೂಡಾ ಹೊರಬಂದಿದೆ.

ಅಂದು ಅಲ್ಲಿ ರೋಸನ್ ರಸ್ತೆಯಲ್ಲಿ ಬಂಧಿತರಾಗಿದ್ದ ಯಹೂದಿಗಳು ಮಾತ್ರವಲ್ಲ, ಅದಾಗಲೆ ಆಶ್ವಿಟ್ಸ್‌ಗೆ ಕಳುಹಿಸಿದ್ದ 25 ಯಹೂದೀಯರನ್ನೂ ಹಿಂತಿರುಗಿಸಲಾಯಿತು, ಇದು ದೊಡ್ಡ ಪವಾಡವೇ ಸರಿ. ನಮ್ಮ ಸರಕಾರದ ರೀತಿನೀತಿಗಳಿಗೆ ನಾವೂ ಪಾಲುದಾರರಾಗಿರುತ್ತೇವೆ. ಸಕ್ರಿಯವಾಗಿ ಪಾಲುಗೊಂಡಿರಬಹುದು, ಸುಮ್ಮನೆ ನಿಂತು ನೋಡಿರಬಹುದು. ನೇರವಾಗಿಯೋ ಪರೋಕ್ಷವಾಗಿಯೋ ಜನರ ಬೆಂಬಲವಿಲ್ಲದೆ ಹಿಟ್ಲರನ ಸಾವಿನ ಯಂತ್ರ ಹನ್ನೆರಡು ವರ್ಷಗಳ ಕಾಲ ತನ್ನ ರಾಜಕೀಯ ವಿರೋಧಿಗಳನ್ನು, ಯಹೂದಿಯರನ್ನು ಮುಗಿಸಿ ಮೆರೆಯಲು ಸಾಧ್ಯವಿರಲಿಲ್ಲ. ಇಂತಹ ಸಂದರ್ಭದಲ್ಲಿ ಈ ಮಹಿಳೆಯರ ಪ್ರತಿಭಟನೆ, ಚರಿತ್ರೆಯ ಒಂದು ಸಣ್ಣ ತಿರುವಿಗೆ ಕಾರಣವಾಯಿತು. ನಿಜ, ಈ ಮಹಿಳೆಯರ ಪ್ರತಿಭಟನೆಯ ಉದ್ದೇಶ ವೈಯಕ್ತಿಕವಾಗಿತ್ತು ತಮ್ಮ ಕುಟುಂಬದ ಸದಸ್ಯರ ಬಿಡುಗಡೆಯಾಗಿತ್ತು. ಆದರೂ ನಾಜಿ ಜರ್ಮನಿಯಲ್ಲಿ ಪ್ರತಿಭಟನೆಯ ಸಾಧ್ಯತೆಯನ್ನು ಇದು ತೋರಿಸಿತ್ತು. 'ಸರ್ವಾಧಿಕಾರಿ ಕೂಡಾ ಜನರ ಮನಸ್ಸಿನಿಂಗಿತವನ್ನು ಗಮನಿಸುತ್ತಾನೆ' ಎಂಬ ಸತ್ಯವನ್ನು ಹೊರಹಾಕಿತ್ತು. ನಾಜಿಗಳು ಜನರ ಅಭಿಪ್ರಾಯಕ್ಕೆ, ಪ್ರತಿಭಟನೆಗೆ, ಪ್ರತಿಕ್ರಿಯಿಸಿದ ಸಂದರ್ಭವನ್ನು ತೋರಿಸಿತ್ತು. ಇತಿಹಾಸದ ಒಂದು ಸಾಧ್ಯತೆಯನ್ನು ತೋರಿಸಿತ್ತು. ☐☐

# ಕರ್ನಾಟಕ - ಉತ್ಕೃಷ್ಟ ಕಲೆ, ಸಾಹಿತ್ಯ, ಸಂಸ್ಕೃತಿ............ಗಳ ಬೀಡು

- ಸಾವಿರಾರು ವರ್ಷಗಳ ಶ್ರೇಷ್ಟ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕದ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಹಿರಿಮೆ ಕನ್ನಡಿಗರದು. ಸಾಮಾಜಿಕ ಸಮಾನತೆ, ಹೃದಯ ವೈಶಾಲ್ಯತೆಯ ಮೂಲ ಸೆಲೆಯಲ್ಲಿ ಮೂಡಿಬಂದ ಈ ನಾಡಿನ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ಸಂದ ಅಭೂತಪೂರ್ವ ಕೊಡುಗೆಗಳು.

- ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ, ತಂತ್ರಜ್ಞಾನಗಳಂತಹ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧಗೊಳಿಸಬೇಕೆಂಬುದೇ ಸರ್ಕಾರದ ದೃಢ ಸಂಕಲ್ಪ. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಪ್ರಾಶಸ್ತ್ಯ ನೀಡಿ ಕಾರ್ಯಪ್ರವೃತ್ತವಾಗಿದೆ.



ಕರ್ನಾಟಕ ವಾರ್ತೆ.
Karnataka Information

# ಮಾನವ ಸಂಕುಲಕ್ಕೆ ಮಾರಕ

ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಹೆಣ್ಣು ಶಿಶು ಭ್ರೂಣ ಹತ್ಯೆಯ ಪ್ರಮಾಣ ಏರುತ್ತಿದೆ. ಸರ್ಕಾರವಾಗಲಿ, ಪೋಲೀಸರಾಗಲೀ, ಕಣ್ಮುಚ್ಚಿ - ಕೈಕಟ್ಟಿ ಕುಳಿತಿದ್ದಾರೇನೋ ಎಂಬ ಅನುಮಾನ ಬರುತ್ತದೆ.

'ಹೆಣ್ಣು ಶಿಶು ಭ್ರೂಣ ಹತ್ಯೆ ಅಪರಾಧ' ಎನ್ನುವ ಕಾನೂನೇ ಜನಕ್ಕೆ ಗೊತ್ತಿಲ್ಲ, ಈ ಬಗ್ಗೆ ಅವರಿಗೆ ಅರಿವೇ ಇಲ್ಲ' ಎನ್ನುತ್ತಾರೆ ಪೋಲಿಸ್ ವರಿಷ್ಠ ಶ್ರೀ ಅಜಯ್ ಕುಮಾರ್ ಸಿಂಗ್.

ಹೆಣ್ಣು ಶಿಶು ಭ್ರೂಣಹತ್ಯೆಯಲ್ಲಿ ಪಂಜಾಬ್ ಮತ್ತು ಹರಿಯಾಣಗಳು ಮಿಕ್ಕೆಲ್ಲ ರಾಜ್ಯಗಳನ್ನು ಮೀರಿಸುತ್ತವೆ. ಅಂದ ಮಾತ್ರಕ್ಕೆ ದಕ್ಷಿಣ ಭಾರತದಲ್ಲಿ ಕಡಿಮೆ ಎಂದೇನಿಲ್ಲ. ಕರ್ನಾಟಕದಲ್ಲಿಯೂ ಸ್ತ್ರೀ-ಪುರುಷರ ಪ್ರಮಾಣ ಏರುಪೇರಾಗುತ್ತಿದೆ.

ಹೆಣ್ಣು ಶಿಶು ಭ್ರೂಣ ಹತ್ಯೆಗೆ 'ಸತ್ತ ನಂತರ ಸ್ವರ್ಗಕ್ಕೆ ದಾರಿ ಸಿಗುವುದು ಮಗರಾಯನಿಂದಲೆ' ಎಂಬ ಜನರ ಸಾಮಾನ್ಯ ನಂಬಿಕೆಯೂ ಕಾರಣ ಎನ್ನುತ್ತಾರೆ ಅಜಯ್ ಕುಮಾರ್ ಸಿಂಗ್. ಇರಬಹುದು, ಆದರೆ ಈ ನಂಬಿಕೆ ಮಾನವ ಸಂಕುಲದ ಗತಿಯನ್ನೇ ಬದಲಿಸುತ್ತದೆ ಎಂಬುದನ್ನು ಜನಸಾಮಾನ್ಯರಿಗೆ ಮನವರಿಕೆ ಮಾಡುವುದು ಎಂಬುದು ತತ್‌ಕ್ಷಣದ ಲಕ್ಷ್ಯವಾಗಬೇಕು.

ಮಾಧ್ಯಮ ಪ್ರಪಂಚದಲ್ಲಿ ಈಗಲೂ ಪುರುಷರದೇ ಮೇಲುಗೈ ಅಂತೆ. ಹಾಗೆಂದು ಸಮೀಕ್ಷಾ ವರದಿಯೊಂದು ಹೇಳುತ್ತದೆ.

ಲಂಡನ್ನಿನಲ್ಲಿ ಬಿಡುಗಡೆಯಾದ ಸ್ತೃತೀಯ ಜಾಗತಿಕ ಮಾಧ್ಯಮ ನಿಗಾ ಯೋಜನೆಯೊಂದರ ವರದಿ ಪ್ರಕಾರ ಸುದ್ದಿ ಮಾಡುವುದರಲ್ಲೇ ಆಗಲಿ ಅಥವಾ ಅದನ್ನು ವರದಿ ಮಾಡುವುದರಲ್ಲೇ ಆಗಲಿ, ಮಹಿಳೆಯರು ಪುರುಷರಿಗಿಂತ ಹಿಂದಿದ್ದಾರೆ. ಈ ಯೋಜನೆಗಾಗಿ 74 ದೇಶಗಳ ಸುದ್ದಿ ಪತ್ರಿಕೆಗಳು, ರೇಡಿಯೋ ಹಾಗೂ ಟಿವಿ ಸ್ಟೇಷನ್‌ಗಳನ್ನು ಪರಾಮರ್ಶೆಗೆ ಒಳಪಡಿಸಲಾಯಿತು. ಆದರೆ ಇದರಲ್ಲಿ ನಿಯತಕಾಲಿಕಗಳು ಅಥವಾ ಇತರ ಹೊಸ ಮಾಧ್ಯಮಗಳು ಒಳಗೊಂಡಿರಲಿಲ್ಲ, ಸುದ್ದಿಗೆ ಗ್ರಾಸವಾಗಿದ್ದವರ ಅರ್ಥಾತ್ ಸಂದರ್ಶಿಸಲ್ಪಟ್ಟವರು ಅಥವಾ ಸುದ್ದಿಯ ಕೇಂದ್ರ ಬಿಂದು ಆಗಿದ್ದವರ ಪೈಕಿ ಕೇವಲ ಶೇ. 21ರಷ್ಟು ಜನ ಮಹಿಳೆಯರಾಗಿದ್ದರು ಎಂದು ಈ ವರದಿ ತಿಳಿಸುತ್ತದೆ.

ಈ ಯೋಜನೆ ಆರಂಭವಾದದ್ದು 1995ರಲ್ಲಿ, ಆಗ ಶೇ.17ರಷ್ಟಿದ್ದ ಪ್ರಮಾಣದಲ್ಲಿ ಕ್ರಮೇಣ ಏರಿಕೆ ಇದೆಯಾದರೂ, 2005ರ ಸಂದರ್ಭದಲ್ಲಿ ಈ ವ್ಯತ್ಯಾಸ ಗಂಭೀರವಾಗಿಯೇ ಇದೆ. ಈಗ ಸದ್ಯಕ್ಕೆ ಸುದ್ದಿಯಾಗುವ / ಸುದ್ದಿ ಮಾಡುವ ಮಹಿಳೆ / ಪುರುಷರ ಪ್ರಮಾಣ 1:5ರಷ್ಟಿದೆ ಎಂದು ಈ ವರದಿ ಅಂತಿಮವಾಗಿ ಹೇಳುತ್ತದೆ.

*(ಆಧಾರ)*

# ಬಂಡಾಯ ಮಹಿಳಾ ಸಂವೇದನೆ

-ಡಾ|| ವಿನಯಾ

ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಬಂಡಾಯ ಎನ್ನುವುದಾದರೆ, ಕನ್ನಡದಲ್ಲಿ ಮಹಿಳಾ ಸಂವೇದನೆಯ ಮೂಲಸೆಲೆ ಬಂಡಾಯ ಮನೋಧರ್ಮದ್ದಾಗಿದೆ.

ಬೇಟೆಯಿಂದ ಬೇಸಾಯಕ್ಕೆ ಹೊರಳಿದ ಮಾನವ ಚರಿತ್ರೆ ಉತ್ಪಾದಕ-ಅನುತ್ಪಾದಕ ಎಂಬ ಅವೈಚಾರಿಕ ಶ್ರಮ ವಿಭಜನೆಯನ್ನು ಹುಟ್ಟು ಹಾಕಿತು. ಮಹಿಳೆ ಮಾನವ ಗುಲಾಮಳಾಗಿ ಇತಿಹಾಸದಲ್ಲಿ ದಾಖಲಾದಳು. ಸಮಾಜೋ-ಆರ್ಥಿಕ ರಚನೆ ಪುರುಷ ಹಿತಾಸಕ್ತವಾದುದರಿಂದ ಭಾಷೆ-ಸಾಹಿತ್ಯ-ಸಂಸ್ಕೃತಿಗಳಲ್ಲಿ ಏಕಮುಖಿ ಚಲನೆ ಆರಂಭವಾಯ್ತು. ಮಹಿಳಾ ಸಂವೇದನೆ ಸಾಂಸ್ಕೃತಿಕ ಸಂರಚನೆಯ ಆಚೆಯೇ ಉಳಿಯಿತು.

ಮಹಿಳಾ ಸಂವೇದನೆಯ ಮೊದಲ ದಾಖಲೆಯಾದ ಜಾನಪದ ಸಾಹಿತ್ಯ ಹೆಣ್ಣಿನ ತಪ್ತತೆಯನ್ನು ಹೇಳುತ್ತದೆ. 'ಹೆಣ್ಣಾಗಿರೋದಕ್ಕಿಂತ ಮಣ್ಣಾಗಿರೋದು ಲೇಸು' ಎಂಬ ಪಿಸುಗು ತನ್ನ ಸ್ಥಿತಿಯ ನಿವೇದನೆಯಷ್ಟೇ ಅಲ್ಲ ; ಹೆಣ್ಣನ್ನು ಮಣ್ಣಿನಂತೆ ತುಳಿದ ಸ್ಥಿತಿಗತಿಗಳ ಕುರಿತ ಎಚ್ಚರವನ್ನೂ ಧ್ವನಿಸುತ್ತದೆ. ಈ ಎಚ್ಚರ ತಣ್ಣನೆಯ ಪ್ರತಿಭಟನೆಯಾಗಿ ರೂಪುಗೊಂಡಿದೆ. ಜಾನಪದ ಮಹಿಳಾ ಸಂವೇದನೆ ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡಿದೆಯೇ ಹೊರತು ಅಪ್ರಶ್ನಾರ್ಹವಾಗಿ ಒಪ್ಪಿಕೊಳ್ಳಲಿಲ್ಲ.

***ಹೆಣ್ಣು ಹುಟ್ಯಾವಂತ ಹೇಳಿ ಕಳುಹಲು ಬ್ಯಾಡ***
***ಹೆಣ್ಣೆಂದರವರು ಹೆದರ್‍ಯಾರ । ಕಂದಮ್ಮ***
***ಹೆಣ್ಣಲ್ಲ ನಮಗ ರವಿ ಚೆನ್ನ ॥***

ಹೆಣ್ಣಿನ ಹುಟ್ಟನ್ನು ತಿರಸ್ಕರಿಸುವ ಕೌಟುಂಬಿಕ-ಸಾಮಾಜಿಕ ಚೌಕಟ್ಟಿನ ಪರಿವೆಯಿದ್ದೂ, ತನ್ನ ಭಾವಲೋಕವನ್ನು ಸ್ಪಷ್ಟಪಡಿಸಿ ಪ್ರಧಾನ ಚಿಂತನವಿಧಾನದಿಂದ ಪ್ರತ್ಯೇಕತೆಯನ್ನು ಕಾದುಕೊಳ್ಳುವ ಪರಿ ವಿಶಿಷ್ಟವಾಗಿದೆ. ಜೈವಿಕ ಭೇದ ಸಾಂಸ್ಕೃತಿಕ ಭೇದವಾಗಿ ರೂಪುಗೊಂಡ ವ್ಯವಸ್ಥೆಯಲ್ಲಿ ಸಂವೇದನೆಯ ನೆಲಗಳು ಪ್ರತ್ಯೇಕಗೊಂಡಿದ್ದನ್ನು ಮಹಿಳಾ ಸಂವೇದನೆ ಗ್ರಹಿಸಿದೆ. 'ಹೆಣ್ಣುಮಕ್ಕಳ ದುಃಖ ಹೆತ್ತವ್ವ ಬಲ್ಲಳು' -ಎನ್ನುವಾಗ ಪರಂಪರಾಗತವಾಗಿ ಸಂವೇದನೆಗಳು ವಿಭಜಿತ ಸ್ತರದಲ್ಲೇ ಮುಂದುವರಿದಿದ್ದನ್ನು ಹೇಳಲಾಗಿದೆ. ಅಧಿಕಾರವಿಹೀನ ಸಮುದಾಯದ ಅತೃಪ್ತಿ-ಅಸುಖ-ಕನಸು-ಕಲ್ಪನೆಗಳು ಪ್ರತ್ಯೇಕತೆಯನ್ನು ಪಡೆದಿವೆ. ಪ್ರಧಾನ ಪರಂಪರೆಗೆ ಈ ಸಂವೇದನೆಯನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಜನಪದ ಕಥೆಗಳಲ್ಲಿ ದೈಹಿಕ ಅಶಕ್ತತೆಯ ಪ್ರಾಣಿಗಳು ಬಲಿಷ್ಠ ಪ್ರಾಣಿಗಳನ್ನು ಉಪಾಯದಿಂದ ಜಯಿಸುವುದು - ಅಶಕ್ತತೆಯನ್ನು ಒಪ್ಪಿತ ಸ್ಥಿತಿಯಾಗಿಸಿಕೊಂಡ ಮಹಿಳಾ ಸಂವೇದನೆ ಕಂಡುಕೊಂಡ ಬಿಡುಗಡೆಯ ನೆಲೆಯಾಗಿದೆ.

ಪ್ರಧಾನ ವಾಹಿನಿಯೊಂದಿಗೆ ಮಹಿಳಾ ಸಂವೇದನೆ ಕೈಜೋಡಿಸಿದ ಮೊದಲ ಉದಾಹರಣೆ ಕನ್ನಡದ ಮಟ್ಟಿಗೆ ವಚನಕಾರ್ತಿಯರದ್ದು. ಸಮಾನತೆಯ ಮೊದಲ ಧ್ವನಿ ಈ ನೆಲದಲ್ಲಿ ರೂಪುಗೊಂಡ ಹೊತ್ತಲ್ಲಿ ಮಹಿಳಾ ಸಂವೇದನೆ ಸಶಕ್ತ ಬಂಡಾಯದ ಸ್ವರೂಪದಲ್ಲಿತ್ತು. ದೇಹಬದ್ಧ ಚಿಂತನಾ ಕ್ರಮಗಳನ್ನು ಜೀವಬದ್ಧತೆಯೆಡೆಗೆ ಹೊರಳಿಸಿದ್ದು ವಚನಕಾರರ ಸಾಧನೆ.

***ಮೊಲೆ ಮುಡಿ ಇದ್ದುದು ಹೆಣ್ಣೆಂದು ಪ್ರಮಾಣಿಸಲಿಲ್ಲ***
***ಮೀಸೆ ಕಾಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ***
***ಅದು ಜಗದ ಹಾಗೆ, ಬಲ್ಲವರ ನೀತಿಯಲ್ಲ.***

-ಈ ಸ್ಪಷ್ಟತೆ ಹೊಸ ಹೊಳಹುಗಳಿಗೆ ಕಾರಣವಾಯಿತು. ವ್ಯವಸ್ಥೆ ರೂಪಿಸಿದ 'ಪೂರಕ' ಪಾತ್ರವನ್ನು ಮೀರುವ ಹಂಬಲ ವ್ಯಕ್ತವಾಯ್ತು. ಹೆಣ್ಣೆಂಬ ಕಾರಣಕ್ಕಾಗಿ 'ಆಯ್ಕೆ'ಯ ಹಕ್ಕೇ ಇಲ್ಲದ ನೋವನ್ನು ಕೊಗ್ಗವ್ವೆ ಹೇಳುತ್ತಾಳೆ. ಪ್ರಧಾನ ಪರಂಪರೆಯೊಂದಿಗಿನ ನೇರ ಮುಖಾಮುಖಿಯಲ್ಲಿ ವಚನಕಾರ್ತಿಯರ ಬಂಡಾಯ ಪ್ರಜ್ಞೆಯಿದೆ. "ಪತಿಯಾಜ್ಞೆಯಲಿ ಪತಿಕರದಲಿ ಪೋಪದಿರೆ ಯಾತನೆಯಲ್ಲವೇ ?" ಎಂಬ ಗಂಗಾಂಬಿಕೆಯ ಪ್ರಶ್ನೆಯಿಂದ, "ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" -ಎಂಬ ಮಹಾದೇವಿಯಕ್ಕನ ನಿರ್ಧಾರದವರೆಗೂ ಈ ಪ್ರಜ್ಞೆಯ ವ್ಯಾಪ್ತಿಯಿದೆ. "ನನ್ನ ಕಾಲಿನ ಮುಳ್ಳ ನಾನೇ ತೆಗೆಯಬೇಕಲ್ಲದೆ ಅನ್ಯರಲ್ಲ" -ಎಂಬ ವಚನಕಾರ್ತಿಯರ ಅರಿವು ಆಧುನಿಕ ಮಹಿಳಾ ಸಂವೇದನೆಯ ಆದ್ಯತೆಯಾಗಿ ಮುಂದುವರಿಯಿತು.

ಇಪ್ಪತ್ತನೆಯ ಶತಮಾನದ ವಸಾಹತುಶಾಹಿ ವ್ಯವಸ್ಥೆ ಸ್ವಾತಂತ್ರ್ಯ ಸಂಗ್ರಾಮ, ಸಾರ್ವತ್ರಿಕ ಶಿಕ್ಷಣ, ಕೈಗಾರಿಕೀಕರಣ, ರಾಷ್ಟ್ರೀಯ ಪುನರುತ್ಥಾನವಾದಿ ಚಳುವಳಿಗಳು ಮಹಿಳೆಯ ಸಾಂಸ್ಕೃತಿಕ ಅಸ್ಪೃಶ್ಯತೆಯನ್ನು ಸಾಂಕೇತಿಕವಾಗಿ ನಿವಾರಿಸಿದವು. ಈ ಸಂದರ್ಭದ ಮಹಿಳಾ ಸಂವೇದನೆ ಜಾನಪದ ಮಹಿಳಾ ಸಾಹಿತ್ಯ ಮತ್ತು ವಚನಕಾರ್ತಿಯರಲ್ಲಿ ತಮ್ಮ ಅನನ್ಯತೆಯನ್ನು ರೂಪಿಸಿಕೊಂಡಿದೆ. ಸಾಹಿತ್ಯದ ಪ್ರಧಾನ ಪರಂಪರೆಯಿಂದ

ಮತ್ತು ಸಮಕಾಲೀನ ಆಶಯಗಳಿಂದ 'ದೂರ'ವನ್ನು ಸಾಧಿಸಿಕೊಂಡಿದೆ.

ಹಾಗಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ಸಿದ್ಧ ವಿಂಗಡಣಾ ಕ್ರಮದಲ್ಲಿ ಮಹಿಳಾ ಸಂವೇದನೆಯನ್ನು ವಿಶ್ಲೇಷಿಸುವುದು ಸಾಧ್ಯವಿಲ್ಲ. ಕನ್ನಡ ನವೋದಯ ಪರಂಪರೆ ಹೆಣ್ಣಿನ ಆದರ್ಶದ ರೂಪ ನಿರ್ವಚನದಲ್ಲಿ ತೊಡಗಿದಾಗ, ಲೇಖಕಿಯರು ಹೆಣ್ಣಿನ ಸಮಸ್ಯೆ ಮತ್ತು ಏಕಮುಖ ಒತ್ತಡದ ಬಗ್ಗೆ ಮಾತಾಡುವುದನ್ನು ಆದ್ಯತೆಯಾಗಿ ಸ್ವೀಕರಿಸುತ್ತಾರೆ. ಪ್ರಧಾನ ಸಾಹಿತ್ಯ ದಾಂಪತ್ಯವನ್ನು ಗೃಹದೇವತೆಯನ್ನು ವೈಭವಿಸುತ್ತಿದ್ದಾಗ ಬೆಳಗೆರೆ ಜಾನಕಮ್ಮನಂಥ ಕವಯಿತ್ರಿ ತುಂಬ ಭಿನ್ನವೆನಿಸುವ ಅಪ್ಪಟ ಸ್ತ್ರೀ ನೆಲೆಯ ಚಿತ್ರಣವನ್ನು ಕೊಡುತ್ತಾರೆ.

**ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ**
**ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತೆ**
**ಬಂಡೀಗೆ ಬಸವನು ಶಿರಬಾಗಿಕೊಂಡಂತೆ.**

ಹೆಣ್ಣಿನ ಅನುಭವ ಪ್ರತ್ಯೇಕವಾಗಿಯೇ ಉಳಿದುಬಿಟ್ಟಿದೆ ಎಂಬ ಸತ್ಯವನ್ನು ಗ್ರಹಿಸಲಾಗಿದೆ.

**ಪೆತ್ತವರಿಗೆ ನೀ ಬೇರೆ ನಿನಗೆ ನೀನೆ ಬೇರೆ**
**ಜಗವನ್ಯ ಜಗವನ್ಯ ನಿನದೆಂಬುದು ಶೂನ್ಯ**
**ದುಷ್ಟಧರ್ಮಗಳೆಲ್ಲ ಕ್ರೂರ ಕರ್ಮಗಳೆಲ್ಲ**
**ಅಡಿಗಡಿಗೊಂದುಪಾಯವ ಹೊಂಚುತಿವೆ.**

ಹೊಸಗನ್ನಡದ ಮೊದಲ ಕಾದಂಬರಿಗಳಾದ 'ಇಂದಿರಾಬಾಯಿ', 'ವಾಗ್ದೇವಿ'ಗಳು ವಿಧವಾ ವಿವಾಹವನ್ನು ಪ್ರತಿಪಾದಿಸುತ್ತವೆ. ಆದರೆ ತಿರುಮಲಾಂಬಾ, ಕಲ್ಯಾಣಮ್ಮನವರು ಬರೆದ ಮೊದಲ ಮಹಿಳಾ ಕಾದಂಬರಿಗಳು ವೈಧವ್ಯದ ದುರಂತವನ್ನು ಚಿತ್ರಿಸುತ್ತವೆ. ಮರು ವಿವಾಹವೊಂದನ್ನೇ ಅದರ ಪರಿಹಾರವಾಗಿ ಸ್ವೀಕರಿಸುವುದಿಲ್ಲ. ವಿಧವೆ-ಸಧವೆ ಎಂಬುದು ಪುರುಷ ವ್ಯವಸ್ಥೆಯ ಮೌಲ್ಯಾರೋಪಣವೇ ವಿನಾ ಇದು ಹೆಣ್ಣಿನ ಸಹಜ ಸ್ಥಿತಿಯಲ್ಲ. ವೈಧ್ಯವ್ಯದ ಕಾರಣಕ್ಕಾಗಿ ಬದುಕಿನ ಸಾಧ್ಯತೆಗಳಿಂದ ವಂಚಿತಳಾಗದೆ, ಅವಮಾನಿತಳಾಗದೆ ಬದುಕುವ ಹಕ್ಕೊತ್ತಾಯವನ್ನು ಈ ಕೃತಿಗಳು ಮಂಡಿಸುತ್ತವೆ.

ಪ್ರಗತಿಶೀಲ ಸಂದರ್ಭ ಶೋಷಣೆಯ ವಿರುದ್ಧದ ಧ್ವನಿಯಾಗಿದ್ದರೂ ಹೆಣ್ಣನ್ನು ಮೇಲು-ಕೀಳು ಎಂಬ ಸಿದ್ಧಪಡಿಯಚ್ಚಿನಲ್ಲಿಟ್ಟು ಚಿತ್ರಿಸಿತು. ಈ ಪಡಿಯಚ್ಚು ವ್ಯವಸ್ಥೆಯ ಸಾಂಪ್ರದಾಯಿಕ ತೀರ್ಮಾನವಾಗಿತ್ತು. ಈ ಕಪ್ಪು-ಬಿಳುಪು ಛಾಯೆಗಳಿಂದ ಹೆಣ್ಣನ್ನು ಬಿಡಿಸಿ ಸ್ವಂತಿಕೆಯ ರಕ್ತದಾನ ಮಾಡುವ ಮೂಲಕ ವ್ಯಕ್ತಿ ಗೌರವದ ಪಾತ್ರಗಳನ್ನು ನಿರ್ಮಿಸುವ ಸವಾಲನ್ನು ಮಹಿಳಾ ಸಂವೇದನೆ ಎದುರಿಸಿತು. ಅಸಹನೀಯ ಸ್ಥಿತಿಗಳಲ್ಲೂ ಜೀವನದ ತುಡಿತಗಳನ್ನು ಕಳೆದುಕೊಳ್ಳದ, ಸೋಲುಗಳಲ್ಲೂ ಧೀಮಂತಿಕೆಯಿಂದ ಬದುಕಿದ ಕಂತಿ, ದ್ಯಾವಂಕ್ಕರಂಥ ಪಾತ್ರಗಳು ಈ ಕಾಲಘಟ್ಟದಲ್ಲಿ ಮಹಿಳಾ ಸಂವೇದನೆಯ ಅಧಿಕೃತ ದಾಖಲೆಗಳಾಗಿವೆ.

ನವ್ಯದ ರೂಪನಿಷ್ಠತೆ ಸಾಂಪ್ರದಾಯಿಕ ವೈಭವೀಕರಣ ಮತ್ತು ಕಾಮಕೇಂದ್ರಿತ ಧೋರಣೆಯಲ್ಲಿ ತಲ್ಲೀನವಾದಾಗ ಮಹಿಳಾ ಬಂಡಾಯ ತನ್ನ ಸ್ಪಷ್ಟತೆಯನ್ನು ಪಡೆದಿತ್ತು. ನವ್ಯ ಸಾಹಿತ್ಯ ಹೆಣ್ಣನ್ನು ಲೈಂಗಿಕ ತುಚ್ಛೀಕರಣದ ಮಾದರಿಗಳಾಗಿ, ವಿಕೃತಿಗೆ ಉದಾಹರಣೆಯಾಗಿ ಬಳಸಿಕೊಳ್ಳತೊಡಗಿದಾಗ, ಮಹಿಳಾ ಸಂವೇದನೆಯಲ್ಲಿ ಬಂಡಾಯ ಪ್ರಜ್ಞೆ ಸ್ಪಷ್ಟವಾಗತೊಡಗಿತು. ಪ್ರಧಾನ ಸಾಹಿತ್ಯದ ಪರಂಪರೆಯಲ್ಲಿ ಬಂಡಾಯ ಘೋಷಿತಗೊಳ್ಳುವುದಕ್ಕಿಂತ ಮುಂಚೆಯೇ ಮಹಿಳಾ ಬರವಣಿಗೆಯಲ್ಲಿ 'ಶೋಷಣೆ ಬಂಡಾಯ ಇತ್ಯಾದಿ' ಎಂಬಂಥ ಕೃತಿಗಳು ಬಂದಿದ್ದು ಸಾಂಕೇತಿಕ ಮಹತ್ವವನ್ನು ಪಡೆದಿದೆ.

ಸಾಹಿತ್ಯದ ಪ್ರಧಾನ ವಾಹಿನಿಯಲ್ಲಿಯೇ ಶೋಷಿತಪರ ನಿಲುವು ವ್ಯಕ್ತಗೊಂಡಿದ್ದು ಹತ್ತಿಕ್ಕಲ್ಪಟ್ಟ ಮಹಿಳಾ ಸಂವೇದನೆಯ ಮುಕ್ತ ಅಭಿವ್ಯಕ್ತಿಗೆ ಕಾರಣವಾಯಿತು. ಬದುಕಿನ ಪುರೋಗಾಮಿ ಧೋರಣೆಯಲ್ಲಿ ನಂಬಿಕೆಯಿಟ್ಟ ಸ್ಥಾಪಿತ ವ್ಯವಸ್ಥೆಯ ವಿರುದ್ಧದ ಬಂಡಾಯ ಪ್ರಜ್ಞೆ ಮಹಿಳಾ ಸಂವೇದನೆಯ ಬಹುದಿನದ ಹಸಿವಾಗಿತ್ತು. ಚಾರಿತ್ರಿಕ ಅನಿವಾರ್ಯತೆಯಲ್ಲಿ ರೂಪುಗೊಂಡ ಬಂಡಾಯ ಪರಂಪರಾಗತ ಮಹಿಳಾ ಅನುಭವಗಳಿಗೆ ಮೌಲಿಕತೆಯನ್ನು ನೀಡಿತು. ವೈಯಕ್ತಿಕ ನಿವೇದನೆಯಲ್ಲೂ ಸಾಮಾಜಿಕ ಪ್ರತಿನಿಧಿಯಾಗುವ ಅವಕಾಶ ಒದಗಿದ್ದರಿಂದ ಮುಕ್ತ ಅಭಿವ್ಯಕ್ತಿ ಸಾಧ್ಯವಾಯಿತು. ವಚನಕಾರ್ತಿಯರ ಮುಕ್ತತೆ ಮತ್ತು ಪ್ರಾಮಾಣಿಕತೆಯನ್ನು ಮಹಿಳಾ ಸಂವೇದನೆ ಅನುಭವಿಸಿತು. ನವ್ಯ ಮತ್ತು ಬಂಡಾಯ ಕಾಲಘಟ್ಟದ ಮಹಿಳೆಯ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಗಮನಾರ್ಹ ವ್ಯತ್ಯಾಸಗಳಿಲ್ಲ. ಆದರೆ ಸಂವೇದನೆಯಲ್ಲಿ ತೀವ್ರ ವ್ಯತ್ಯಾಸಗಳು ನಡೆದಿವೆ. ಮಹಿಳಾ ಚರಿತ್ರೆಯನ್ನು ಕಾಳಜಿ ಮತ್ತು ಪ್ರೀತಿಯಿಂದ ಗ್ರಹಿಸಿದ ಬಂಡಾಯದ ತಿಳುವಳಿಕೆ ಮಹಿಳಾ ಸಂವೇದನೆಯನ್ನು ಪ್ರಭಾವಿಸಿತು. ಹಲವಾರು ಬರಹಗಾರ್ತಿಯರು ನವ್ಯ ಕಾಲದ ಬರವಣಿಗೆಯನ್ನು ತುಂಬ ತಡವಾಗಿ ಬಂಡಾಯ ಸಂದರ್ಭದಲ್ಲಿ ಪ್ರಕಟಿಸಿದರು. ಈ ಹಿರಿಮೆ ಸಲ್ಲುವುದು ಬಂಡಾಯ ಚಳುವಳಿ ಹಾಗೂ ಸಾಹಿತ್ಯಕ್ಕೆ. ಸ್ತ್ರೀವಾದಿ ಚಿಂತನಕ್ರಮ ಹಾಗೂ ಬಂಡಾಯದ ಸಿದ್ಧಾಂತಗಳು ಮಹಿಳಾ ಸಂವೇದನೆ ಪ್ರಧಾನ ಪರಂಪರೆಯೊಂದಿಗೆ ಸಂವಹಿಸಲು ಯೋಗ್ಯ ವೇದಿಕೆಯನ್ನು ನಿರ್ಮಿಸಿದವು.

ಚರಿತ್ರೆಯಲ್ಲಿ ಈ ಜೊತೆಗಾರಿಕೆ ನಡೆದದ್ದು ಎರಡೇ ಎರಡು ಸಂದರ್ಭಗಳಲ್ಲಿ -

ಒಂದು ವಚನಕಾರರ ಸಂದರ್ಭ. ಇನ್ನೊಂದು ಬಂಡಾಯದ ಸಂದರ್ಭ.

ಬಂಡಾಯ ಮಹಿಳಾ ಸಾಹಿತ್ಯದ ಸಂವೇದನೆ ನೆಲೆಯನ್ನು ಮೂರು ಹಂತಗಳಾಗಿ ಪ್ರತ್ಯೇಕಿಸಬಹುದು -

1. ನೇರ ಪ್ರತಿಭಟನೆ
2. ತಾತ್ತ್ವಿಕತೆಯ ಶೋಧ
3. ಪರ್ಯಾಯ ಚಿಂತನೆಗಳು

ಇದು ಮಹಿಳಾ ಸಂಕಥನದ ಪ್ರತ್ಯೇಕ ಚರಿತ್ರೆಯಾಗಿದೆ.

**1. ನೇರ ಪ್ರತಿಭಟನೆ :** ಮಹಿಳಾ ಸಂವೇದನೆ ಗ್ರಹಿಸಿದ ಮೊದಲ ಅನುಭವ ತನ್ನ ಗುಲಾಮ ಗಿರಿಯದು. ತುಳಿತದ ಸ್ಥಿತಿ ಬಯಲಾದಂತೆ ಶೋಷಕನ ಪಾತ್ರದಲ್ಲಿ ಕಂಡವನು ಪುರುಷ ಗಂಡು ಹೆಣ್ಣಿನ ವಿರೋಧಿ ಎಂಬ ಆಲೋಚನೆ ರೂಪುಗೊಂಡಿತು. ಶೋಷಿತ ನೆಲೆಗಳ ಅನಾವರಣ ಮತ್ತು ಆಕ್ರೋಶದ ಪ್ರತಿಭಟನೆ ಈ ಹಂತದ ಮಹಿಳಾ ಸಂವೇದನೆಯ ಅನನ್ಯತೆಯಾಗಿದೆ. ಬಂಡಾಯದ ಆರಂಭದಲ್ಲಿ ದಲಿತ ಸಂವೇಧನೆ ಮೇಲ್ವರ್ಗ-ಮೇಲ್ಜಾತಿಗಳ ವಿರುದ್ಧ ಆಕ್ರೋಶವನ್ನು ಹೊಂಧಿತ್ತು.

**ಇಕ್ರಲಾ ಒದೀರ್ಲಾ**
**ಆ ಕಳ್ಳ ಸೂಳೆ ಮಕ್ಕಳ ಮೂಳೆ ಮುರೀರ್ಲಾ.....**

ಎಂಬಷ್ಟು ರೋಷ-ರೊಚ್ಚುಗಳ ಹಿಂದೆ ಚಾರಿತ್ರಿಕ ಒತ್ತಡವಿತ್ತು. ಅದೇ ರೀತಿ ಮಹಿಳಾ ಚಾರಿತ್ರಿಕ ಪ್ರಜ್ಞೆ ಆವೇಶಪೂರ್ಣ ಅಭಿವ್ಯಕ್ತಿಯನ್ನು ಒಳಗೊಂಡಿತು -

**ಅಯ್ಯೊ ನನಗೊಂದು ಆಸೆ**
**ಹಾಗೆ ಹೀಗೆ ಹೆಣ್ಣ ಬುಗುರಿಯಾಡಿಸುವ**
**ಇವುಗಳ ಕುಂದಿಗೆ**
**ಝಾಡಿಸಿ ಒದೆಯಬೇಕು**
**ಒಮ್ಮೆಯಾದರೂ.**

ಪರಂಪರಾಗತವಾಗಿ ದಮನಕ್ಕೊಳಗಾದ ನೋವಿನ ದಾಖಲಾತಿಯಿದು. ಮಹಿಳಾ ಅಭಿವ್ಯಕ್ತಿ ವೈಯಕ್ತಿಕ ಗೊಣಗುವಿಕೆಯಿಂದ ಸಾಮುದಾಯಿಕವಾಗುವ ಚೆರಗನ್ನು ಅನುಭವಿಸಿತು. ಪಿತೃ ವ್ಯವಸ್ಥೆಯ ಮೌಲ್ಯಗಳಿಂದಾಗಿ ಗಂಡುಮಗುವಿಗಾಗಿ ಪ್ರಾರ್ಥಿಸುತ್ತಿದ್ದ ಹೆಣ್ಣು ಈ ಹಂತದಲ್ಲಿ ಗಂಡು ಮಗುವನ್ನು ನಿರಾಕರಿಸುವ ಹಂತವನ್ನು ತಲುಪಿದ್ದು ಸಂವೇದನೆಯಲ್ಲಿ ನಡೆದ ಸ್ಥಿತ್ಯಂತರವಾಗಿದೆ. ಇದರ ನೇತ್ಯಾತ್ಮಕ ಪರಿಣಾಮ ಏನೇ ಇರಲಿ, ಇಂಥ ಧಿಕ್ಕಾರ ಹುಟ್ಟುವ ವ್ಯವಸ್ಥೆಯ ಕಡೆ ಗಮನ ಹರಿಯುತ್ತದೆ. ಗೀತಾ ನಾಗಭೂಷಣರವರ 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿಯ ಲಚ್ಚಿಯ ಪಾತ್ರವನ್ನು ಗಮನಿಸಬೇಕು. ಸಮಾಜದ ವಿವಿಧ ಸ್ತರಗಳ ಗಂಡಸರ ಲೈಂಗಿಕ ವಿಕೃತಿಗೆ ಬಲಿಯಾಗುವ ಲಚ್ಚಿ ಗಂಡು ಮಗುವಿನ ತಾಯಿಯಾಗುತ್ತಾಳೆ. ಆ ಮಗುವನ್ನು ಕೊಲ್ಲುವ ಪ್ರಯತ್ನದಲ್ಲಿ ಸಿಕ್ಕಿಬಿದ್ದು ಕಟಕಟೆಯಲ್ಲಿ ನಿಂತಿರುತ್ತಾಳೆ. ನ್ಯಾಯಾಧೀಶ ಕೇಳುವ ಪ್ರಶ್ನೆಗೆ "ಇದು ಗಂಡ್ಸ ಮಗಾ ಸ್ವಾಮಿ ನಾಳೆ ಇವ್ನೂ ಬೆಳ್ದು ದೊಡ್ಡೋನಾಗಿ.... ನನ್ನಂಥಾ ಹೆಣ್ಣುಗೋಳ ಬಾಳಿಗೆ ಕೊಳ್ಳಿ ಇಡೋ ತಂಕಾ.... ಇವ್ನೂ ಕೊಂದು, ನಾನೂ ಸಾಯ್ಬೇಕಂತ ಮಾಡಿವ್ನಿ...." -ಎಂದು ಉತ್ತರಿಸುವುದು. ಸಾಂಸ್ಕೃತಿಕವಾಗಿ ಗಂಡಸುತನದ ಪರಿಕಲ್ಪನೆ ಅಳವಡಿಸಿಕೊಂಡ ಅನಾರೋಗ್ಯಕಾರಿ ಮೌಲ್ಯಗಳನ್ನು ಸಾರಾಸಗಟಾಗಿ ತಿರಸ್ಕರಿಸುವ ರೀತಿಯಾಗಿದೆ. ಇಂಥ ಆಕ್ರೋಶ ಧಿಕ್ಕಾರವನ್ನು ಮಹಿಳಾ ಬಂಡಾಯ ಪ್ರಜ್ಞೆ ಅಳವಡಿಸಿಕೊಂಡಿದ್ದು ಐತಿಹಾಸಿಕ ಅನಿವಾರ್ಯತೆಯಾಗಿತ್ತು.

**2. ತಾತ್ತ್ವಿಕತೆಯ ಶೋಧ :** ಮಹಿಳೆಯ ಅನುಭವ ಪ್ರಪಂಚಕ್ಕೆ ವೈಚಾರಿಕ ಸ್ಪರ್ಶ ದಕ್ಕತೊಡಗಿದಂತೆ, ಶೋಷಣೆಯ ಮೂಲಗಳನ್ನು ಶೋಧಿಸಲಾಯಿತು. ಈ ಹುಡುಕಾಟದಲ್ಲಿ ಮಹಿಳಾ ಸಂವೇದನೆಯ ತಾತ್ತ್ವಿಕ ಸ್ವರೂಪ ಸ್ಪಷ್ಟಗೊಳ್ಳತೊಡಗಿತು. ಹೆಣ್ಣಿನ ಬದುಕಿಗೆ ಪುರುಷ ವಿರೋಧಿಯಲ್ಲ ಪುರುಷ ಹಿತಾಸಕ್ತ ಆಲೋಚನಾ ವಿಧಾನ ವಿರೋಧಿಯಾದದ್ದು ಎಂಬ ತಿಳುವಳಿಕೆ ಬೇರೂರಿತು. ಹೆಣ್ಣಿನ ಬದುಕನ್ನು ನಿಗ್ರಹಿಸುತ್ತಿರುವ ಸಾಮಾಜಿಕ ಸಂರಚನೆಯ ಬಗ್ಗೆ ವಸ್ತುನಿಷ್ಠ ನಿರಾಕರಣೆ ಕಂಡುಬಂತು. ಈ ಹಂತದಲ್ಲಿ ಪಿತೃವ್ಯವಸ್ಥೆಯ ಮೌಲ್ಯಾದರ್ಶಗಳ ವಿಡಂಬನೆ ವ್ಯಕ್ತವಾಯ್ತು.

**ನಾವು ಪತಿವ್ರತೆಯರಲ್ಲ...**
**ನಿಮ್ಮ ಕಾಮಾಗ್ನಿಕುಂಡಕ್ಕೆ**
**ನಮ್ಮ ಶೀಲವನು ಬಲಿಗೊಟ್ಟು**
**ನಿಮ್ಮಿಂದಲೇ ಪತಿವ್ರತೆಯರ ಪಟ್ಟವೇರಿ**
**ಪ್ರಾತಃಕಾಲದ ಸ್ಮರಣೆಯಲಿ ಉಳಿದು**
**ನರಳುತ್ತಿರುವವರು ನಾವು**
**ನಾವು ಪತಿವ್ರತೆಯರಲ್ಲ...**

ನಮ್ಮ ಸಂಸ್ಕೃತಿಯಲ್ಲಿ ಬೆರೆತುಹೋದ ಏಕಮುಖಿ ಮೌಲ್ಯಗಳ ವಿಡಂಬನೆಯಿದು. ಭೂತಕಾಲದ ಭಯಾನಕ ಇತಿಹಾಸ ಹಾಗೂ ವರ್ತಮಾನದ ಅಸಹನೀಯತೆಗಳು ಸಂವೇದನೆಯ ಮೂಲ ಕಾಳಜಿಯಾಗಿದೆ. ಲಿಂಗಾಧಾರಿತ ಶೋಷಣೆಯ ಅವೈಚಾರಿಕತೆಯನ್ನು ಮುಖ್ಯ ಪ್ರಶ್ನೆಯಾಗಿ ಎತ್ತಿಕೊಂಡಿದೆ.

**ಅದೇ ವೀರ್ಯ ಅದೇ ಗರ್ಭಕ್ಕೆ ಹುಟ್ಟಿ**
**ಅದೇ ಮೊಲೆಯ ಚೀಪಿ**
**ಬೆಳೆದಿದ್ದೇವೆ ಸ್ವಾಮಿ ನಾವೂ..**

ಇಂಥ ವಾಸ್ತವಿಕ ಚಿಂತನೆ ಸಂವೇದನೆಯ ಮೂಲ ಸ್ವರೂಪವಾಗಿ ದಾಖಲಾಗಿದೆ. ದೇಶ-ಕಾಲ-ವರ್ಣ-ವರ್ಗ ಭೇದಗಳು ಹೆಣ್ಣಿನ ನೋವಿನ ಲಕ್ಷಣಗಳನ್ನು ಬದಲಿಸಿದೆ, ಆದರೆ ನೋವು ಸ್ಥಾಯಿಯೇ ಆಗಿದೆ. ಹೆಣ್ಣೆಂಬ ಜೈವಿಕ ಭಿನ್ನತೆ ರಾಜಕೀಯ-ಆರ್ಥಿಕ-ಸಾಮಾಜಿ-ಸಾಂಸ್ಕೃತಿಕ ಕೀಳರಿಮೆಯನ್ನು ಸೃಷ್ಟಿಸುತ್ತದೆ ಎಂಬ ತಾತ್ತ್ವಿಕ ಸ್ಪಷ್ಟತೆಗಾಗಿ ವಿಭಿನ್ನ ವಸ್ತುಗಳನ್ನು ವಿಶ್ಲೇಷಿಸುವ ನೂರಾರು ಕಥೆ ಕಾದಂಬರಿಗಳು ಬಂದಿವೆ. ತನ್ನ ಸ್ಥಿತಿಗೆ ಕಾರಣ 'ಹಾಳು ಹೆಣ್ಣಿನ ಜನ್ಮ' ಎಂಬ ಮುಗ್ಧತೆಯಿಂದ ಬಿಡುಗಡೆಗೊಳ್ಳುತ್ತಿರುವ ಹಂತ ಇದು.

ಈ ಎಚ್ಚರದಿಂದ ಇತಿಹಾಸ-ಪುರಾಣಗಳ ಏಕಮುಖಿ ಪಠ್ಯವನ್ನು ಮರುಚಿಂತನೆಗೆ ಒಡ್ಡುವ ಪ್ರಕ್ರಿಯೆ ಆರಂಭಗೊಂಡಿತು. ಪುರುಷ ನಿರ್ಮಿತ ಸ್ತ್ರೀ ಮಾದರಿಗಳಿಗೆ ಪ್ರತಿ ಮಾದರಿಗಳನ್ನು ನಿರ್ಮಿಸುವ ಕಳಕಳಿ ವ್ಯಕ್ತವಾಯಿತು. ಎಚ್.ವಿ. ಸಾವಿತ್ರಮ್ಮನವರ ಸೀತೆ-ರಾಮ-ರಾವಣ, ವಿಮುಕ್ತಿ ಅನುಪಮಾ ನಿರಂಜನರ 'ಮಾಧವಿ'ಯಂಥ ಕೃತಿಗಳು ಗಮನಾರ್ಹವಾದವು. 'ಹಂಚಿಕೊಂಡು ತಿನ್ನಲು ಪ್ರೇಮ ಅವಲಕ್ಕಿಯಲ್ಲ' -ಎಂದು ದಶರಥನ ಸ್ವೇಚ್ಛೆಗೆ ಮೌನ ಧಿಕ್ಕಾರ ತೋರುವ ಕೌಸಲ್ಯೆ; 'ರಾಮ ನೀನು ಸತ್ತು ರಾವಣ ಬದುಕಿದ್ದಿದ್ದರೆ ನಾನಿಂಥ ಅವಮಾನವನ್ನು ಎದುರಿಸಬೇಕಿರಲಿಲ್ಲ' -ಎಂದು ಅಗ್ನಿಪ್ರವೇಶದ ವೇಳೆಯಲ್ಲಿ ಅಂದುಕೊಳ್ಳುವ ಸೀತೆ-ಇವೆಲ್ಲ ಹೊಸ ಆಲೋಚನೆಯ ಕ್ರಮವನ್ನೇ ತೆರೆದಿಟ್ಟವು. ಕರುಣಾಳು ರಾಘವನಲ್ಲಿ ತಪ್ಪಿಲ್ಲ ಹೆಣ್ಣಾಗಿ ಹುಟ್ಟಿದ್ದು ನನ್ನದೇ ತಪ್ಪು - ಎಂದು ಪರಂಪರವಾಗಿ ಗೋಳಿಡುವ ಸೀತೆ ಇಲ್ಲಿ ಬದಲಾಗುತ್ತಾಳೆ. ಜೀವಪರವಾಗಿ ನಿಲ್ಲುತ್ತಾಳೆ. ಬದುಕಿನ ಸತ್ಯತೆಯೆಡೆಗೆ ತುಡಿಯುತ್ತಾಳೆ. ತುಂಬ ಮುತುವರ್ಜಿಯಿಂದ ಪುರಾಣೇತಿಹಾಸಗಳ ಸ್ತ್ರೀ ಮಾದರಿಗಳನ್ನು ಪ್ರತಿ ಮಾದರಿಗಳಾಗಿಸಲಾಗಿದೆ. ಪುರುಷ ಪ್ರಭುತ್ವವನ್ನು ಧಿಕ್ಕರಿಸಿ ನಡೆದ ಅಕ್ಕಮಹಾದೇವಿಯ ಸಾಧ್ಯತೆ ಮತ್ತು ಮಿತಿಗಳೆರಡನ್ನೂ ಮಹಿಳಾ ಸಂವೇದನೆ ಗ್ರಹಿಸಿದೆ. ಭೂತಕಾಲವನ್ನು ಮುಖಾಮುಖಿಯಾಗಿಸಿಕೊಳ್ಳುತ್ತ ವರ್ತಮಾನದ ಜಟಿಲತೆಗೆ ಉತ್ತರ ರೂಪಿಸುವ ಇತ್ಯಾತ್ಮಕ ಪ್ರಯತ್ನ ಇದು.

ಚಿಂತನಾ ಕ್ರಮದ ಈ ಸ್ಪಷ್ಟತೆ ಪರಾವಲಂಬಿ ಬದುಕಿಗೆ ಭಾಷ್ಯ ಬರೆಯತೊಡಗಿತು.

**ಹುಟ್ಟೆಂಬುದು ಉರಿಕೊಳ್ಳಿ**
**ಬಾಲ್ಯವೊಂದು ಅಗ್ನಿಕುಂಡ**
**ಯೌವನವು ಕಾಳ್ಗಿಚ್ಚಾದ ನನಗೆ**
**ಬೆಳಕಿನ ಸುಖ ಗೊತ್ತಿಲ್ಲ ಸಖ.**

ಹಕ್ಕಿಲ್ಲದವರಾಗಿಯೇ ಹುಟ್ಟುವ ಅನುಭವದ ಕಳವಳವನ್ನೂ ಮಹಿಳಾ ಸಂವೇದನೆ ಅಭಿವ್ಯಕ್ತಿಸಿದೆ.

3. **ಪರ್ಯಾಯ ಚಿಂತನೆಗಳು :** ವ್ಯವಸ್ಥೆ ಮೂಲಭೂತವಾಗಿ ಬದಲಾಗದೇ ಸಂವೇದನೆಯ ನೆಲೆಯಲ್ಲಿ ಪರ್ಯಾಯ ಚಿಂತನೆಗಳನ್ನು ರೂಪಿಸಿಕೊಳ್ಳುವ ಸಂದಿಗ್ಧತೆಯನ್ನು ಮಹಿಳಾ ಸಂವೇದನೆ ಎದುರಿಸಿತು. ಪ್ರತಿ ಮಾದರಿಗಳನ್ನು ಸೃಷ್ಟಿಸುವಾಗ ತನ್ನನ್ನು ಶೋಧಿಸಿಕೊಳ್ಳುವ ಪ್ರಕ್ರಿಯೆ ನಡೆಯಿತು.

**ನಾವು ಹುಡುಗಿಯರೇ ಹೀಗೆ....**
**ಏನೆಲ್ಲ ಒಡಗುಟ್ಟಿದರೂ**
**ಹೇಳಬೇಕಾದ್ದನ್ನು ಹೇಳಲಾಗದೆ**
**ಏನೇನೆಲ್ಲ ಅನುಭವಿಸಿ ಸಾಯುತ್ತೇವೆ.**
**ಡಬ್ಬಿಯೊಳಗೆ ಹಿಟ್ಟು ಒತ್ತಿಟ್ಟಂತೆ**
**ಜುಮ್ಮೆನಿಸುವ ಆಲೋಚನೆಗಳನ್ನೆಲ್ಲ**
**ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ**
**ನಾವು - ಹುಡುಗಿಯರೇ ಹೀಗೆ...**

ಸ್ವ-ವ್ಯಕ್ತಿತ್ವ ನಿರ್ಮಾಣದೊಂದಿಗೆ, ಮಹಿಳಾ ಪರ ದೃಷ್ಟಿಯಿಂದ ಬದುಕಿನ ನಿರ್ವಚನ ನಡೆಯಿತು. ಬಂಡಾಯ ಸಾಹಿತ್ಯದ ತಾತ್ವಿಕತೆ ಮಹಿಳಾ ಸಂವೇದನೆಗೆ ನೈತಿಕ ಒತ್ತಾಸೆಯನ್ನು ನೀಡಿತು. ಬಂಡಾಯ ಪ್ರಜ್ಞೆ ಸಮಸ್ಯೆಗಳನ್ನು ವಿಶ್ಲೇಷಿಸುವಾಗ ಜೀವ ವಿರೋಧಿ ನಿಲುವನ್ನು ತಳೆಯದೆ, 'ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು' ಎಂಬ ಧೋರಣೆಯಲ್ಲಿ ಆರೋಗ್ಯಪೂರ್ಣ ಜೀವನ ವಿಧಾನದ ಮರುಸಂಘಟನೆಯನ್ನು ಬಯಸುತ್ತದೆ. ಹಾಗೆಯೇ ಮಹಿಳಾ ಸಂವೇದನೆ ಸಾಂಪ್ರದಾಯಿಕ ಕುಟುಂಬ ರಚನೆಯನ್ನು ವ್ಯಕ್ತಿಗೌರವದ ಪರಿಕಲ್ಪನೆಯಲ್ಲಿ ರೂಪಿಸಲು ಒತ್ತಾಯಿಸುತ್ತದೆ. ಪ್ರೀತಿ ದೈಹಿಕ ಆಕರ್ಷಣೆ ಅಷ್ಟೇ ಅಲ್ಲ ಅದು ವ್ಯಕ್ತಿತ್ವ ಪಾಲನೆಯ ಕಾಳಜಿಯಾಗಬೇಕು ಎಂಬ ತಿಳುವಳಿಕೆ ಪ್ರೀತಿಯ ಸ್ತರವನ್ನು ವಿಸ್ತರಿಸುವಂಥದ್ದು.

**ಗೆಳೆಯನೊಬ್ಬ ಹೇಳಿದ್ದ ನಿನ್ನ**
**ಮೈ ತುಂಬ ಮುತ್ತುಗದ ಹೂವೆಂದು**
**ಮತ್ತೆ ಮತ್ತೆ ಮೈ ತಿರುವಿ**
**ನೋಡಿಕೊಂಡರೂ**
**ಸೀರೆ ತುಂಬ ತೂತುಗಳು.**

ಇಂಥ ಅಸಹನೀಯತೆಗಳನ್ನು ಸಹ್ಯವಾಗಿಸಿಕೊಳ್ಳುವ ಛಲ ಪ್ರಧಾನವಾಯಿತು.

**ಸೂರ್ಯ ಮುಳುಗಿದನೆಂದರೆ**
**ಪೃಥ್ವಿಯೇಕೆ ಕತ್ತಲಾಗಬೇಕು ?**
**ಅರ್ಥವಿಲ್ಲ.**

ಎಂತಹುದೇ ವಿಷಾದದಲ್ಲೂ ಸ್ವಂತಿಕೆಯನ್ನು ಉಳಿಸಿಕೊಳ್ಳುವ ಹಂಬಲ ಕಂಡುಬರುತ್ತದೆ. ಸಾರಾ ಅಬೂಬಕ್ಕರ್ ಅವರ 'ವಜ್ರಗಳು' ಕಾದಂಬರಿಯ 'ನಫೀಸಾ'ಳ

ಪಾತ್ರವನ್ನು ಗಮನಿಸಬೇಕು. ಗಂಡ ಬಿಟ್ಟವಳೆನಿಸಿಕೊಂಡು, ಮಗುವಿಗೂ ಅಪರಿಚಿತಳಾಗಿ ಅಖಂಡ 30 ವರ್ಷಗಳನ್ನು ಮುದಿ ಅಜ್ಜನೊಂದಿಗೆ ಬಡತನದಲ್ಲಿ ಕಳೆವ ನಫೀಸಾಳಿಗೆ ಬದುಕು ರೋಸಿಹೋಗಿದೆ. ಅಜ್ಜನ ಸಾವಿನ ಸೂಚನೆಯ ತಬ್ಬಲಿತನದಲ್ಲಿ ನಾಳೆಗಳು ಕತ್ತಲ ದಿಬ್ಬಗಳಾಗಿ ಬೆಳೆಯುತ್ತಿದ್ದವು. ಆಗ, ಊರ ಬೇಲಿಯಲ್ಲಿ ಬಿದ್ದಿದ್ದ ಅನಾಥ ಶಿಶುವನ್ನು ಇದ್ದುಳ್ಳವರೆಲ್ಲ ನಿಂತು ನೋಡುತ್ತಿದ್ದಾಗ ನಫೀಸಾ ಗಬಕ್ಕನೆ ಬಾಚಿ ಎದೆಗಪ್ಪಿಕೊಂಡು ಗಟ್ಟಿ ಹೆಜ್ಜೆಗಳನ್ನೂರಿ ಗುಡಿಸಲಿಗೆ ಬರುತ್ತಾಳೆ. ಕತ್ತಲೆಗೆ ಬೆಳಕಿನ ಆಸರೆಯಾಗಿ, ಅನಾಥ ಮಗುವನ್ನು ಎದೆಗೆ ಮಡಿಲಿಗೆ ತುಂಬಿಸಿಕೊಳ್ಳುತ್ತಾಳೆ. ಹೀಗೆ ಬದುಕನ್ನು ಅದರ ಎಲ್ಲ ಅಕರಾಳ-ವಿಕರಾಳತೆಯೊಂದಿಗೆ ಒಪ್ಪಿಕೊಳ್ಳುವ ಮನಃಸ್ಥೈರ್ಯ ಬದುಕಿನ ಪರ್ಯಾಯ ನೆಲೆಯ ಶೋಧವಾಗುತ್ತದೆ. ಬದಲಾಗದ ಬದುಕನ್ನು ತಾನು ಬದಲಾಗುವ ಮೂಲಕ ಎದುರಿಸುವ ತಾಕತ್ತನ್ನು ಮಹಿಳಾ ಸಂವೇದನೆ ಅಭಿವ್ಯಕ್ತಿಸಿದೆ. ವೈದೇಹಿ ಮತ್ತು ನೇಮಿಚಂದ್ರರ ಕಥೆಗಳು 'ಸೋಲನ್ನು ಎದುರಿಸುವ ವಿಧಾನದಲ್ಲಿ ಗೆಲುವಿನ ಗುಟ್ಟಿದೆ'-ಎಂಬ ಮಹಿಳಾ ಸಂಕಥನವನ್ನು ತೆರೆದಿಟ್ಟವು.

**ಬೆಳಗಿನಿಂದ ರಾತ್ರಿಯವರೆಗಿನ ತುಂಬಾ ಕೆಲಸದ ಬಗ್ಗೆ**
**ರಾತ್ರಿಯ ಆಕ್ರಮಣದ ಬಗ್ಗೆ, ಮನಸ್ಸಿನ ಮೇಲೆ**
**ಮುಸುಕೆಳೆದು ಬುದ್ಧಿಗೆ ಬಿರಡೆ ಹಾಕುವ ಬಗ್ಗೆ**
**ಗುರುತಿಸಿಲ್ಲದ ಬಗ್ಗೆ, ಒಟ್ಟಿನಲ್ಲಿ ತುಳಿತಕ್ಕೊಳಗಾದ ಬಗ್ಗೆ.**

ಬಹಳಷ್ಟು ಹೇಳಿಯಾಗಿದೆ. ಇನ್ನೂ ಗೊಣಗುವುದರಲ್ಲಿ ಅರ್ಥವಿಲ್ಲ. ಪ್ರತಿಭಾರ ಕವಿತೆಯ ಈ ಸಾಲು ಹೊಸ ಸಾಧ್ಯತೆಯ ತಲ್ಲಣವನ್ನು ಧ್ವನಿಸುತ್ತದೆ. ಸಮಕಾಲೀನ ಬಂಡಾಯ ಸಾಹಿತ್ಯ 'ಹೊಸ ಶೋಧ'ದ ಸಂಕಟದಲ್ಲಿ ಸ್ತಬ್ಧತೆಯನ್ನು ಕಂಡಂತೆ; ಮಹಿಳಾ ಸಂವೇದನೆ 'ಮೌನ' ಮತ್ತು 'ಮರುಹುಟ್ಟಿ'ನ ಆತಂಕವನ್ನು ಎದುರಿಸುತ್ತಿದೆ. ಜಾಗತೀಕರಣ ಮತ್ತು ಕೋಮುವಾದಿ ರಾಜಕಾರಣ ತನ್ನ ಕ್ರೌರ್ಯದ ಬೇರುಗಳನ್ನು ಆಳಕ್ಕಿಳಿಸುತ್ತಿದೆ. 'ಬಂಡಾಯ' ಮನುಷ್ಯ ಸಂವೇದನೆಯ ಏಕರೂಪಿ ಲಕ್ಷಣವಾಗಬೇಕಿದೆ. ಸಾಹಿತ್ಯ ಮಾದರಿಗಳು ಪ್ರತಿಕ್ರಿಯೆಯಾಗಿ ದಾಖಲಾತಿಯಾಗಿ ರೂಪ ಪಡೆಯುತ್ತಿವೆ. ಅಭಿವ್ಯಕ್ತಿಯ ಒತ್ತಡ ಹೆಚ್ಚು ಮಹತ್ವವನ್ನು ಪಡೆಯುತ್ತಿದೆ. ವ್ಯಕ್ತಿನಿಷ್ಠತೆಗಿಂತ ಸಮೂಹ ನಿಷ್ಠತೆ ಆದ್ಯತೆಯದಾಗಿದೆ. ಚಿಂತನಾ ವಿಧಾನದಲ್ಲಾಗುತ್ತಿರುವ ಈ ಬದಲಾವಣೆ ಸೃಜನಶೀಲತೆಯನ್ನು ವಸ್ತುಸತ್ಯದತ್ತ ಕರೆದೊಯ್ಯುತ್ತಿದೆ. ಸಹಜವಾಗಿಯೇ ವಸ್ತುವ್ಯಾಪ್ತಿ ಹೆಚ್ಚಿದೆ. ಇವತ್ತಿನ ಮಹಿಳಾ ಸಂವೇದನೆ ಸ್ತ್ರೀತ್ವದ ಗ್ರಹಿಕೆಗಳನ್ನು ಅಂತರ್ಗತಗೊಳಿಸಿಕೊಂಡು ಹೊಸ ಪರಿಭಾವನೆಯಲ್ಲಿ ಬೆಳೆಯುತ್ತಿವೆ. ಇತ್ತೀಚಿನ ಮಹಿಳಾ ಕಾದಂಬರಿಗಳಾದ 'ಸ್ತ್ರೀಲೋಕ', 'ಶಿವಗಂಗಾ', 'ಗಾಂಧಿ ಬಂದ', 'ಜಮೀನು' ಇವುಗಳ ವಸ್ತು ವೈವಿಧ್ಯವನ್ನು ಗಮನಿಸಬಹುದು. ಸಾಮುದಾಯಿಕ ಸಂವೇದನೆಯಲ್ಲಿ ಪಾಲು ಪಡೆವ ಆತಂಕ, ಸಂಭ್ರಮಗಳು ಮುಗಿದು ಸಮೂಹ ಪ್ರಜ್ಞೆಯ ವಕ್ತಾರಿಕೆಯನ್ನು ಮಹಿಳಾ ಬರವಣಿಗೆ ವಹಿಸಿಕೊಂಡಿದೆ.

ಬಂಡಾಯ ಸಾಹಿತ್ಯದ ಆಶಯಗಳು ಮಹಿಳಾ ಸಂವೇದನೆಯ ಅಭಿವ್ಯಕ್ತಿಗೆ ಯೋಗ್ಯ ಪರಿಸರವನ್ನು ನಿರ್ಮಿಸಿ, ಒತ್ತಾಸೆಯಾಗಿ ನಿಂತವು. ಆದರೆ ಬಂಡಾಯ ಸಾಹಿತ್ಯದ ವಸ್ತು ಧೋರಣೆಗಳಿಗೂ ಮಹಿಳಾ ಬಂಡಾಯ ಸಂವೇದನೆಗಳಿಗೂ ಮೂಲಭೂತ ವ್ಯತ್ಯಾಸಗಳಿವೆ. ಮಹಿಳಾ ಸಂವೇದನೆ ತನ್ನ ಅನನ್ಯತೆಯಲ್ಲಿ ಭಿನ್ನ ಸಾಂಸ್ಕೃತಿಕ ಚರಿತ್ರೆಯಾಗಿ ಬೆಳೆದಿದೆ.

**ಮಹಿಳಾ ಭಾಷೆ**

ಭಾಷೆ ಸಾಂಸ್ಕೃತಿಕ ಚರಿತ್ರೆಯ ವ್ಯಕ್ತರೂಪ. ಸಮಾಜೋ-ಆರ್ಥಿಕ ರಚನೆಗಳು ಭಾಷೆಯನ್ನು ರೂಪಿಸುತ್ತವೆ. ಎಲ್ಲ ಭಾಷೆಗಳಲ್ಲೂ ಮಹಿಳಾ ಭಾಷೆ ಎಂಬುದೊಂದು ಪ್ರತ್ಯೇಕ ಘಟಕ. ಮಹಿಳಾ ಭಾಷೆ ಅಧಿಕಾರಯುತವಾದದ್ದಲ್ಲ ; ಗುಲಾಮಿತನದ್ದು. ಕೆಳವರ್ಗ ಮತ್ತು ಕೆಳಜಾತಿಗಳು ಯಜಮಾನಶಾಹಿಯ ಎದುರು ಬಳಸುವ ಭಾಷೆಗೂ, ಮಹಿಳಾ ಭಾಷೆಗೂ ಆಂತರಿಕ ಸಂಬಂಧವಿದೆ. ಈ ಭಾಷೆ ದೀರ್ಘೀಕರಣದ್ದು. ಮೆಲುದನಿಯದ್ದು. ಕೆಳಲಯದ್ದು. ಅಲ್ಪವಿರಾಮದ್ದು ಮತ್ತು ಅಸ್ಪಷ್ಟವಾದುದು. ಮಾತು ಮಹಿಳೆಯ ಪಾಲಿಗೆ ಕೇವಲ ಸಂವಹನಕ್ಕಾಗಿ, ನಿರ್ದಿಷ್ಟ ಬದುಕಿನ ವಲಯದಲ್ಲೇ ಪುನರಾವರ್ತಗೊಳ್ಳುವ ಯಾಂತ್ರಿಕ ಸ್ವರೂಪದ್ದು. ಬದುಕಿನ ವಿಭಿನ್ನ ವಲಯಗಳ ಪರಿಚಯವಿಲ್ಲದ ಹೆಣ್ಣಿಗೆ ವಿಭಿನ್ನ ಭಾಷಾ ಕೋಶಗಳು ಸಹಜವಾಗಿ ದಕ್ಕಲಿಲ್ಲ. ಜೊತೆಗೆ ಸಾಮಾಜಿಕ ನಡವಳಿಕೆ-ಮೌಲ್ಯಗಳು ಭಾಷೆಯನ್ನು ನಿರ್ಭಿಡೆಯಿಂದ ಬಳಸುವ ಅವಕಾಶವನ್ನು ಕೊಡಲಿಲ್ಲ. ಹಾಗಾಗಿ ಮಹಿಳಾ ಪದಕೋಶ ಚಿಕ್ಕದು ಮತ್ತು ಪ್ರತ್ಯೇಕವಾದದ್ದು. ಜಾನಪದ ಗರತಿ ತನ್ನೊಳಗಿಗೆ ಮಾತು ಕೊಡಲಾಗದ ಸಂಕಟದಲ್ಲಿ ಅನುಭವವನ್ನು ದೈವತ್ವಕ್ಕೆ ಸಮೀಕರಿಸಿ ಅಥವಾ ಸಾಕ್ಷೀಕರಿಸಿ ಸುಮ್ಮನಾಗುತ್ತಾಳೆ. ಇತ್ತೀಚಿನ ಮಹಿಳಾ ಸಂವೇದನೆ ಈ ಮಿತಿಯನ್ನು ಮೀರುವ ಪ್ರಯತ್ನ ಮಾಡಿದೆ.

ತನ್ನದಲ್ಲದ ಬದುಕನ್ನ ಬದುಕುತ್ತಿರುವ ಹೆಣ್ಣು, ತನ್ನದಲ್ಲದ ಮಾತನ್ನು ಆಡಲು ಒತ್ತಾಯಿಸಲ್ಪಟ್ಟಿದ್ದಾಳೆ. ಭಾಷಾ ರಚನೆಗಳು ಪಿತೃಸಂಸ್ಕೃತಿಯ ಅರ್ಥಗಳನ್ನು ಒಳಗೊಂಡಿರುವಾಗ ಅವುಗಳನ್ನು ತನ್ನ ಸಂವೇದನೆಗೆ ಒಗ್ಗಿಸಿಕೊಳ್ಳುವುದು ಮುಜುಗರದ ವಿಷಯವಾಗಿದೆ. ಈ ಭಾಷಾ ಸಂದಿಗ್ಧತೆಯನ್ನು ಅಕ್ಕಮಹಾದೇವಿಯಂಥ ವಚನಗಾರ್ತಿಯರೂ

ಎದುರಿಸಿದ್ದಾರೆ. ಸೀರೆಯ ನಿರಾಕರಣದೊಂದಿಗೇ "ಗಂಡುಗಚ್ಚೆಯ ತೊಡುವೆ" ಎಂಬ ಪುರುಷ ಪ್ರಾಧಾನ್ಯತೆಯನ್ನು ಅಕ್ಕ ಆರೋಪಿಸಿಕೊಳ್ಳುತ್ತಾಳೆ. ಇಂಥ ತೊಡಕನ್ನು ಬಂಡಾಯ ಸಂದರ್ಭದ ಮಹಿಳಾ ಸಂವೇದನೆ ಪ್ರಧಾನವಾಗಿ ಗ್ರಹಿಸುತ್ತದೆ. ಬಾನು ಮುಷ್ತಾಕರ ಕಥೆಯೊಂದರ ನಾಯಕಿ, ಗೆಳತಿಗೆ ತನ್ನ ಗಂಡನನ್ನು ಪರಿಚಯಿಸುವಾಗ ತಳಮಳವನ್ನು ಅನುಭವಿಸುತ್ತಾಳೆ. "ಮುಜಾಹಿದ್, ನನ್ನ ಮನೆಯಾತ.... ಓ ಇದು ತಪ್ಪು ಮನೆಯಲ್ಲಿರುವಾಕೆ ಹೆಂಡತಿ. ಮುಜಾಹಿದ್ ತನ್ನ ಆಫೀಸಿನಾತ. ಛೇ ! ಆಫೀಸು ನನ್ನದಲ್ಲ... ಮತ್ತೇನು ? ಯಜಮಾನರು ಅನ್ನಬಹುದು. ಅಂದರೆ ನಾನು ಆಳಾಗಬಹುದು..... ಪ್ರಾಣಿಯಾಗಬಹುದು.... ನಾಯಿಯಾಗಬಹುದು.... ಯಜಮಾನ ಆಳು ಬೇಡ, ಬೇಡ. ಗಂಡ ? ಎಂತಹ ಗಂಡ ? ಯಮಗಂಡ ಅಂತಲೇ ಭಾರೀ ಗಂಡಾಂತರ ಕಾದಿದೆ ಎಂಬರ್ಥವೇ?..... ಪತಿ ಬಹಳ ಗ್ರಾಂಥಿಕ ಪದ. ಆಡುಮಾತಲ್ಲ. ಪತಿ ಅಂದೊಡನೆ ದೇವರು ಎಂಬುದನ್ನು ಸೇರಿಸುವ ತವಕವಾಗುತ್ತದೆ....." ಇಲ್ಲಿ ಏಕಮುಖಿ ಸಂಸ್ಕೃತಿಯ ಭಾಷಿಕ ರೂಪಗಳು ಮಹಿಳೆಗೆ 'ಅನ್ಯ' ಅನ್ನಿಸುತ್ತಿರುವುದರ ವಿವರಣೆಯಿದೆ. ಭಾಷಾ ಅಂತರಂಗದ ಶೋಧ ಸಂವೇದನೆಯ ಮುಖ್ಯ ಲಕ್ಷಣವಾಗಿದೆ.

ಅಧೀನ ಪ್ರಜ್ಞೆ ಹೆಣ್ಣಿನ ಭಾಷೆಯನ್ನು ಸಾಂಕೇತಿಕಗೊಳಿಸಿದೆ. ಸಂಕೀರ್ಣವಾಗಿಸಿದೆ. ದಿನನಿತ್ಯದ ಕೌಟುಂಬಿಕ ಬದುಕಿನಲ್ಲೂ ಮಹಿಳೆಯ ಮಾತು 'ಸುತ್ತುಬಳಸಿನ'ದಾಗಿರುತ್ತದೆ. ಶಬ್ದಾರ್ಥ ಸಾಧ್ಯತೆಗಿಂತ ಲಯದ ಸಾಧ್ಯತೆಯೆಡೆಗೆ ಹೆಚ್ಚು ತುಡಿಯುತ್ತದೆ. ಸಂಜ್ಞೆ, ಸಂಕೇತ, ಹ್ರಸ್ವ, ದೀರ್ಘಗಳ ಶ್ರಮ ಮಹಿಳಾ ಮಾತಿನ ಸ್ಥಿತಿಯಾಗಿದೆ. ಜಾನಪದ ಗರತಿಯರ ಹಾಡು-ಕತೆಗಳಲ್ಲಿ ಸಾಂಕೇತಿಕತೆ ಪ್ರಮುಖ ಪಾತ್ರ ವಹಿಸಿದೆ. ಅಭದ್ರ ಮನಃಸ್ಥಿತಿಯ ಮಹಿಳಾ ಸಂವೇದನೆ ತನ್ನ ಅಭಿವ್ಯಕ್ತಿಯಲ್ಲಿ ಹೋಲಿಕೆ, ಪುನರುಕ್ತಿ ಪ್ರಮಾಣ ಎಲ್ಲವನ್ನೂ ನಡೆಸುತ್ತದೆ. ಈ ಭಾಷಿಕ ಮುಜುಗರನ್ನು ದಾಟುತ್ತ ವಚನಕಾರ್ತಿಯರ ಸ್ಪಷ್ಟತೆಯ ಕಡೆಗೆ ತುಡಿವ ಪ್ರಯತ್ನ ಬಂಡಾಯ ಕಾಲದ ಮಹಿಳಾ ಬರವಣಿಗೆಯದು.

**ಹೆಜ್ಜೆಯಿಡಬೇಕು ಹುಟ್ಟುಡುಗೆ ತೊಟ್ಟು**
**ಮರೆಯಿಲ್ಲದ ಬಯಲಿದು**
**ನನ್ನ ಕವಿತೆಗೆ ಮುಸುಕು ತಿಳಿಯದು.**

ಎಂಬ ಧೋರಣೆ ಈ ಕಾಲದ ತಿಳುವಳಿಕೆಯಾಗಿದೆ.

ಹೆಣ್ಣು ಮತ್ತು ಹೆಣ್ಣಿಗೆ ಸಂಬಂಧಿಸಿದ ಪದಗಳು ಅವಮಾನ ಅಸಹ್ಯ ಬಯ್ಗಳಗಳಾಗಿ ಬಳಕೆಗೊಳ್ಳುವಾಗ ಅವುಗಳ ಮರುನಿರ್ಮಾಣ ಆತಂಕಕಾರಿಯಾಗಿತ್ತು. ಭಾಷಾ ಪರಿಸರವನ್ನು ಬದಲಿಸುತ್ತ ಭಾಷಾ ರಚನೆಗಳನ್ನು ಬದಲಿಸಿ ಸಮಾನತೆಯ ಹೊಸ ಸಾಧ್ಯತೆಗಳತ್ತ ಹೊರಳಿಸಿಕೊಳ್ಳುವ ಪ್ರಯತ್ನ ನಡೆದಿದೆ.

**1) ಹಾಡು ನೇಯುವಳು ಹುಡುಗಿ**
**ಮುರಿಯುತ್ತ ಮೆಣಸಿನ ಬೊಟ್ಟು**
**ಆಕಾಶದ ಸದ್ದಿಗೆ ಕಿವಿಯ ತೆರೆದಿಟ್ಟು**
**ಕಳೆಯುವಳು ಆಯುಷ್ಯ ಬೊಟ್ಟು ಬೊಟ್ಟು**

**2) ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ**
**ಹೇಳಿ, ಗೊತ್ತೆ ತಿಳಿ ಸಾರು ನಿಮಗೆ ?**
**ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ.**

ಚಾರಿತ್ರಿಕ ಸಂವೇದನೆ ಮತ್ತು ಪದಕೋಶಗಳಿಗೆ ಸ್ವಂತಿಕೆಯ ಹೊಸ ರಕ್ತ ನೀಡಲಾಯಿತು. ಮಹಿಳಾ ದುಡಿಮೆ, ಮಹಿಳಾ ಸಂವಾದ, ಮಹಿಳಾ ಅನುಭವ ವಲಯವನ್ನು ಅಪಮೌಲ್ಯಗೊಳಿಸಲಾಗಿತ್ತು. ಹೆಂಗಸರ 'ಹರಟೆ'ಗೆ ಕಾಡು ಹರಟೆ, ಜೊಳ್ಳು ಹರಟೆ ಎಂಬ ಪ್ರತ್ಯಯಗಳಂಟಿದ್ದವು. ತಾತ್ತ್ವಿಕವಾಗಿ ಅವುಗಳನ್ನು ಮೀರುವ ಒತ್ತಾಸೆಯಲ್ಲಿ 'ಸ್ತ್ರೀಲೋಕ'ದಂಥ ಕೃತಿ ರೂಪ ತಾಳುತ್ತದೆ. ಇಂಥ ಪ್ರಯೋಗ ಶೀಲತೆ, ಮಹಿಳಾ ಸಂವೇದನೆ ಆರೋಪಿತ ಮೌಲ್ಯಗಳಿಂದ ದಾಟಿ ಬರುವ ಪ್ರಕ್ರಿಯೆಯೂ ಆಗಿದೆ. ಶೀಲತೆ, ಮಹಿಳಾ ಸಂವೇದನೆ ಆರೋಪಿತ ಮೌಲ್ಯಗಳಿಂದ ದಾಟಿ ಬರುವ ಪ್ರಕ್ರಿಯೆಯೂ ಆಗಿದೆ. ಹೀಗೆ ಅರ್ಥಪೂರ್ಣ ನೆಲೆಯಲ್ಲಿ ಹೊಸ ಪರಿಭಾಷೆಯ ಶೋಧ ನಡೆದಿದೆ.

ಹೆಣ್ಣಿನ ಅಂತರಂಗದ ಪಿಸುಗುಗಳಿಗೆ ಅಧಿಕೃತತೆ ನೀಡಲು ಬಂಡಾಯ ಸಾಹಿತ್ಯದ ತಾತ್ತ್ವಿಕ ನೆಲೆ ಪೂರಕ ವಾತಾವರಣವನ್ನು ನಿರ್ಮಾಣ ಮಾಡಿದೆ. ☐☐

## ಮಹಾಶ್ವೇತೆಯ ಕನವರಿಕೆ

*ಅಂದು ಅಲ್ಲಿ*
*ಮೊದಲ ಮುತ್ತಿನ ಹೊತ್ತು*
*ಕಲಾವಿದನ ಕನಸು, ಹಿಮಾಲದಯ ಸನ್ನಿಧಿ*
*ಅಚ್ಛೋದದ ಸ್ಫಟಿಕ ಶುಭ್ರ ಪವಿತ್ರ ಜಲ*
*ಕಲ್ಹಾರ, ಕುವಲಯ, ಸುಗಂಧದೊಡನೆ*
*ಹಂಸಧ್ವನಿ*
*ನೆನಪಿನಲ್ಲಿ ಉಲ್ಲಾಸ*
*ನಿಜದಲ್ಲಿಲ್ಲದ ಪಾರದರ್ಶಕ*

*ಆಕಾಶವೇ ನೀರಾಗಿ ಹರಿದಲ್ಲಿ*
*ಮೂಡುವ ಸೂರ್ಯನಲ್ಲಿ*
*ಕಂತುವ ಹೊತ್ತಿನಲ್ಲಿ*
*ನಿರ್ಝರಣಿಯ ದಡದಲ್ಲಿ*
*ಕಾಣಲಿಲ್ಲ ಎಲ್ಲೂ*
*ಜನ್ಮಾಂತರಗಳು*
*ಮಹಾಶ್ವೇತೆ ಕನವರಿಸಿದಳು*

**-ಎಲ್.ಸಿ. ಸುಮಿತ್ರ**

CPMG/KA/BGS-8/2006-08 RNI No. 45577/88
*Posted at Basavanagudi P.O. On the 25/29th of every Month*
*April - 2006*

## ಮರೆತು ಹೋದವಳು

*ಬೆಂಕಿಯಿಲ್ಲದೇ ದಹಿಸುವುದು*
*ಅಸ್ತ್ರವಿಲ್ಲದೆಯೇ ಘಾಸಿ ಮಾಡುವುದು*
*ಬಾಗಿಸಿದರೂ ಮುರಿಯದೇ*
*ಗಾಳಿಯನ್ನು ನಿಯಂತ್ರಿಸಿ*
*ಪ್ರಾಣವಾಯುವಿಗೆ ರೇಷನ್*
*ಬೆಳಕಿಗೆ ಫಿಲ್ಟರ್ ತೊಡಿಸಿ*

*ಉಪ್ಪು ಹುಳಿ ಖಾರಗಳನ್ನು*
*ತಕ್ಕಷ್ಟೇ ಬೆರೆಸಿ*
*ತಮ್ಮ ರುಚಿಗೆ ಹದ ಮಾಡಿಕೊಂಡರು.*

*ಬಳ್ಳಿಯಂತಿರು, ಗಾಳಿಯಂತುಲಿ*
*ಮರದಂತೆ ಬೆಳೆಯಬೇಡ*
*ವಿಧಿ ನಿಷೇಧಗಳ ದಾರಿಯಲಿ*
*ಕಾಣದಂತೆ ಕ್ಷಯಿಸಿದ ಜೀವ*
*ಕೊನೆಗುಳಿದಿದ್ದು ವಿಷಾದ*

*ಸತ್ತಿರುವುದು ಖಚಿತವಾದರೂ*
*ಮೂಗಿಗೆ ಬೆರಳು ಹಿಡಿದು ಪರೀಕ್ಷಿಸಿದರು*
*ಬೆಳದಿಂಗಳನ್ನು ನೋಡಲಿಚ್ಛಿಸಿದ ಕಣ್ಣು*
*ಹೋಯಿತೇ ಮುಚ್ಚಿ*
*ಎಲ್ಲರಿಗೂ ಅವರವರ ಅಡಿಗೆಯ ಚಿಂತೆ.*

*ಇದ್ದಳು ಎಂದೇ ತಿಳಿಯದಿರಲಿಲ್ಲ*
*ಈಗಿಲ್ಲ*
*ನೆನಪಿನ ನೆಲದ ಮೇಲೆ*
*ಮರೆವಿನ ಹುಲ್ಲು, ಕಳೆ ಬೆಳೆದು*
*ಮುಚ್ಚಿ ಹೋಯಿತು ಎಲ್ಲ.*

-ಎಲ್.ಸಿ. ಸುಮಿತ್ರ

"Achala" 108, Skyline Surabhi,
14 - P, Vidyapeeta Road,
BSK III Stage,
Bangalore - 560 085

To :

Smt/Sri